*Approved by the Text Book Committee, Madras.*
*Recognised by the Director of Public Instruction, Madras.*

PUBLISHED BY
THE BALA SAHITYA MANDALA, LTD.,
Kodialbail, Mangalore.

1943





## FOLK TALES FOR LITTLE FOLKS SERIES

**ILLUSTRATED**

1. How The Mice Danced
2. The Lark And Its Eggs
3. The Crow And The Sparrow
4. The Wood Louse Is Dead

**NEW PUBLICATIONS**

5. Master Pepper
6. Rub-a-dub Gummata Ray

# ಕಾವ್ಯರತ್ನಾಕರ




ಉಗ್ರಾಣ ಮಂಗೇಶರಾಯ

( ಸಂಪಾದಕ )




ಮದರಾಸು ಟೆಕ್ಸ್ಟ ಬುಕ್ಸ್ ಕಮಿಟಿಯವರಿಂದ
ಶಾಲೆಗಳ ಮತ್ತು ಪುಸ್ತಕಾಲಯಗಳ ಬಗ್ಗೆ
ಮಂಜೂರಾಗಿದೆ.



ಕಡುಂಕಂಪಂ ಪಿಡಿಕೆಯ್ಸಲಕ್ಕುಮೆ? ಬಳಲ್ದೈತಂದ ತಂಗಾಳಿಯಂ
ಪಿಡಿಯಲ್ ಬರ್ಕುಮೆ? ತೃಷ್ಣೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ
ಕುಡಿಯಲ್ ಬರ್ಕುಮೆ? ಪುಣ್ಯದಿಂದೆ ಪಡೆದಾತ್ಮಾನಂದ ಸೌಖ್ಯಂಗಳಂ
ನುಡಿಯಲ್ ಬರ್ಕುಮೆ ಬೇರದಿಂತುಟೆ ವಲಂ ಕಾವ್ಯಾಮೃತಾಸ್ವಾದನಂ ||

(ಕವಿಕುಂಜರ)


ಏಳನೆ ಮುದ್ರಣ

**ಬಾಲಸಾಹಿತ್ಯಮಂಡಲ, ಲಿಮಿಟೆಡ್,**

ಮಂಗಳೂರು

೧೯೪೮

ಕ್ರಯ ೦-೧೨-೦

# ವಿಷಯಸೂಚಿ

# ಆದಿಪದಪಟ್ಟಿಕೆ



ಮಂಗಳೂರು ನವಭಾರತ ಛಾಪಖಾನೆಯಲ್ಲಿ ಮುದ್ರಿತವಾದುದು.

# ಕಾವ್ಯರತ್ನಾಕರ



## ಆವನಾರು ?

ಮೇಲೆ ನೋಡೆ ಕಣ್ಣ ತಣಿಪ
ನೀಲಪಟದಿ ವಿವಿಧ ರೂಪ
ಜಾಲಗಳನು ಬಣ್ಣಿಸಿರ್ಪ
ಚಿತ್ರಚತುರನಾರ್ ?
ಕಾಲದಿಂದೆ ಮಾಸದಾ ವಿ
ಚಿತ್ರವೆಸಪನಾರ್ ?

ಸುತ್ತ ಪೊಳೆವ ಶೈಲಗಣದ
ಕೊತ್ತಲಂಗಳಿಟ್ಟು, ಕಡಲ
ಸುತ್ತುಗಟ್ಟಿ, ಕೋಟೆಯಿದನು
ಕಲ್ಪಿಸಿರ್ಪನಾರ್ ?
ವಸ್ತುಚಯುವನಿಂತು ರಚಿಪ
ಶಿಲ್ಪಿವರ್ಯನಾರ್ ?

ಗಿರಿಯ ತೊರೆಯ ಬನದ ಹೊಲದ
ಬೆರಗಿನಿಂದೆ ಮೃಗದ ಖಗದ
ಸರಗಳಿಂದಲೀ ವಿಹಾರ
ಭವನವೆಸಪನಾರ್ ?
ಮರೆಯಲಿರ್ದು ಸೊಗವನಿಂತು
ಕವಿಸುತಿರ್ಪನಾರ್ ?

ಜ್ಯೋತಿಗಳನು ಗಗನತಲದಿ,
ಗೀತಗಳನು ವಿಹಗಮುಖದಿ,
ಪ್ರೀತಿಗಳನು ಜನದ ಮನದಿ
ತೋರುತಿರ್ಪನಾರ್ ?
ಮಾತನುಳಿದ ಕವಿತೆಯಿಂತು
ಬೀರುತಿರ್ಪನಾರ್ ?
ಅವನ ಕೃತಿಯು ನೋಡಿ ಮಣಿವೆ
ವವನ ರವವ ಕೇಳಿ ನಲಿವೆ
ವವನ ಭಿಕ್ಷೆಯುಂಡು ಬೆಳೆವೆ
ವವನನರಿಯೆವು;
ಅವನ ಲೀಲೆಗಳನು ಕಾಣ್ಬೆ
ವವನ ಕಾಣೆವು

(ಡಿ. ವಿ. ಗುಂಡಪ್ಪ—ನಿವೇದನ)

---

## ಭಾ ರ ತ ಭೂ ಮಿ

ದೇವಿ ಭಾರತಭೂಮಿ ! ವರದೆ ಶರ್ವಾಣಿ !
ದೇವಮಾನವವಿನುತೆ ಸರ್ವರಲಿ ರಾಣಿ !
ಭೂವಲಯದಲಿ ನಿನ್ನ ಸರಿಯು ಕಂಡರಿಯೆ;
ಭಾವಿಸಲು ನಿನ್ನ ಸಮರನ್ನು ಕೇಳ್ದರಿಯೆ.
ಅಮಿತ ನಗರಾಭರಣಗಳನು ಧರಿಸಿಹಳು;
ವಿಮಲ ಸಾಗರದೊಳಗೆ ತೂಗಿ ಮಲಗಿಹಳು;
ಹಿಮಗಿರಿಯ ಶಿಖರದಲಿ ಧ್ಯಾನಿಸುತಿರುವಳು;
ಯಮುನೆಗಂಗೆಯರ ಶುಭಜಲದಿ ರಮಿಸುವಳು.
ಕೋವಿದರು ವಿದ್ಯೆಯಲಿ ಪಡೆವ ಮೋದದಲಿ,
ಜೀವಪರಮಾತ್ಮಗಳ ಭೇದವಾದದಲಿ,
ತಾವರೆಯ ಕೋಮಲ ಸುವಾಸನೆಯೊಳಿಹಳು
ಮಾವಿನಾ ಸವಿಯೊಳತಿ ಮಧುರವಾಗಿಹಳು.

ಕೋಗಿಲೆಯ ಕಂಠಕಲಕಲದಿ ಕೂಡಿಹಳು;
ಸೋಗೆಯಾ ವರ್ಣವೈವರ್ಣ್ಯದೊಳಗಿಹಳು;
ಯೋಗಿಗಳ ಯೋಗದಲಿ ಗೂಢಳಾಗುವಳು;
ಭೋಗಿಗಳ ಭೋಗದಲಿ ಬೆರಸುತಾಡುವಳು.

ಹಾರುವರ ಮಂತ್ರರವದಲಿ ಕೇಳಿಸುವಳು;
ವೀರರಿದೆಥಮುನಿಗಳೊಳಾಡಿ ಹರಿಯುವಳು;
ನೀರೆಯರು ಪಾಡುತಿರೆ ಸವಿ ಜೋಗುಳವನು;
ತೋರುವಳು ಕಲಿಸುವಳು ದೇಶಪ್ರೇಮವನು.

ಭರತಸುತನಾಮವನು ಜನನದಲಿ ತಳೆದು,
ಹರುಷದಿಂ ಜೀವವನು ನಿನಗೆಂದು ಕಳೆದು,
ಮರಣದನಕಂ ನಿನ್ನ ದಾಸನಹುದೆಂಬಾ
ವರವ ಪಾಲಿಸು, ಭೂಮಿದೇವಿ, ಜಗದಂಬಾ!

(ಮ. ಆನಂತರಾವ್)

---

## ಕನ್ನಡ ನಾಡರಾಣಿ

ಏಳು, ಶೂರರ ಖಣೀ! ಏಳು, ಶೂರರ ರಾಣಿ!
ಏಳು, ತೀರದ ವೀರರಸದ ವಾಣಿ!
ಏಳು, ಮಿಾರಿದ ಜಾನಿ! ಏಳು, ಈ ಸ್ಥಿತಿಗಾಣಿ—
ಏಳು, ವರವರದಪಾಣಿ!

ಶೂರಪುರುಷರ ಕೊನೆಯು, ವೀರಕವಿಗಳ ಗೊನೆಯು,
ಭೀರುತನವೆಂಬ ಶಲ್ಯಕ್ಕೆ ಮೊನೆಯು,
ಧೀರಸತಿಯರ ತೆನೆಯು, ವೀರರಸಗಳ ಸೊನೆಯು,
ಈ ರೀತಿ ನಿನ್ನ ಮನೆಯು.

ಭರದೆ ಬೆಳೆಯುವ ಬೆಳೆಯು, ತ್ವರದೆ ಹರಿಯುವ ಹೊಳೆಯು,
ಇರದೆ ಪ್ರತಿಕಾಲಕ್ಕೆ ಬರುವ ಮಳೆಯೂ,
ವರಲಕ್ಷಣದ ಕಳೆಯು, ಸುರರ ಸೀಮೆಯ ಬೆಳೆಯು,
ಇರವಂಥ ನಿನ್ನ ಇಳೆಯು.

ಸತ್ತಿರುವುದೆದೆ ಸೇರು; ಸುತ್ತಿರುವ ವಿಷ ಹೀರು;
ಬತ್ತಿರುವದಮೃತಝರಿ ಮತ್ತೆ ತೋರು;
ಸತ್ತುಳ್ಳ ನೂರಾರು ಭಿತ್ತಿಗಳ ನೀನೂರು
ಕಿತ್ತು ಭಯ ಬಿಟ್ಟ ಬೇರು.

ಅಂದಿನಂತಹ ಧನವು, ಅಂದಿನಂತಹ ತನುವು,
ಅಂದಿನಂತವರ ಹಿರಿದಾದ ಮನವು,
ಅಂದೆ ಅಂದಿನ ತನುವು, ಚಂದದಾಟಕೆ ಅನುವು
ಎಂದು ತಂದೀತು ದಿನವು?

ನೀನು ನೆಲಸಿದ ಕಾಡು, ಮಾನಿಸುವರೌ ನಾಡು
ಧ್ಯಾನಿಸುವರೌ ನಿನ್ನ ಹಾಡಿ ಹಾಡು.
ಈ ನಾಡಿನೊಳು ಮಾಡು ಪ್ರಾಣಪುತ್ರರ ಬೀಡು—
ಏನು ನಂದನದ ಪಾಡು!

(ಅಂಬಿಕಾತನಯ ದತ್ತ)

---

## ಮೈಸೂರು

ನಿಮ್ಮ ನಾಡಾವುದು?
ಮೈಸೂರು.

ನಿಮ್ಮೂರದಾವದು?
ಮೈಸೂರು.

ಕನ್ನಡದ ಕಣ್ಣದು
ಮೈಸೂರು.

ನಾಲುಮಡಿ ಕೃಷ್ಣನ
ಮೈಸೂರು.

ಅಲ್ಲೆಲ್ಲಿ ನೋಡಿದರು ಬಾನಕರೆಯಲಿ ಹುದುಗಿ ಕಾರಮುಗಿಲಂತಿಹುವು ಬಟ್ಟೆ ಹಬ್ಬಿ;

ತೆರೆ ಎದ್ದುಬಿದ್ದು ಬಹ ಬಯಲಲ್ಲಿ ಹಳ್ಳಿಗಳು, ತಾವರೆಯ ಕೆರೆ, ತೋಟ, ಹೊಲದ ಹಸುರು;

ಕಾಡಿನಲಿ ನುಸಿಯುತ್ತ, ಕಲ್ಲಿನಲಿ ಮೊರೆಯುತ್ತ, ಮರಳಿನಲಿ ಸುಳಿಸುಳಿದು. ಸರಿಯು ದುಮುಕಿ,

ಪಯಿರುಗಳ ಬದುಕಾಗಿ, ಹೊಳಲುಗಳ ಬೆಳಕಾಗಿ, ಕಣ್ಣುಗಳ ಬೆರಗಾಗಿ ಹರಿವ ಹೊನಲು.

ಅಲ್ಲಿ ಅಲೆಅಲೆಯಾಗಿ ಬಂದು, ನೆಲೆನೆಲೆಯಾಗಿ ನಿಂದು, ಹಲತೆರದಿಂದ ನುಡಿದು, ನಡೆದು

ಕಡೆಗೆ ನಾಡೊಂದೆಂದು ದೊರೆಯೊಬ್ಬನವುಗೆಂದು, ಬಾಳಬೆಲೆ ಹುದುವೆಂದು ಕಲಿತು, ಕಲೆತು,

ಜಾಣಿನಲಿ, ಚೆಲುವಿನಲಿ, ಸೊಗಸಿನಲಿ. ನಯದಲೌದಾರ‍್ಯದಲಿ, ಕಾರ‍್ಯದಲಿ ಕಳಶವೆನಿಸಿ,

ಮೆರೆಯುತಿಹ ಜನವನಾನೇನೆಂಬೆ, ಎಂತು ನಾ ಕನ್ನಡಿಗರ‍್ಯೆಸಿರಿಯ ಬಣ್ಣಿಸುವೆನು.

ಚಿನ್ನದ ನಾಡದು,
ಮೈಸೂರು.

ಗಂಧದ ಗುಡಿಯದು,
ಮೈಸೂರು.

ವೀಣೆಯ ಬೆಡಗದು,
ಮೈಸೂರು.

ನಾಲುಮಡಿ ಕೃಷ್ಣನ
ಮೈಸೂರು.

ಅಲ್ಲೊಬ್ಬ ನವುಗಿಹನು ನಾಯಕನು; ಭಕ್ತಿಯಲಿ ನಿಲುನಿಲುಕಿ ಕಣ್ತುಂಬ
ನೋಡುತಿರಲು,

ಆನೆಯಂಬಾರಿಯಲಿ ನಸುನಗೆಯನಿಕ್ಕೆಲಕ್ಕೆ ಬೀರಿ, ಜನರಕ್ಕರೆಯ
ನುಕ್ಕಿಸುವನು.

ಧೀರನಾತನು; ತುಂಬುಗಾಂಬೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು
ಪ್ರಜೆಯ ತಂದೆ.

ಮರೆತು ತನ್ನನು ರಾಜ್ಯಸೇವೆಯಲಿ, ಸಲಿಸುವನು ಧರ್ಮವನು ರಾಜರ್ಷಿ
ಕರ್ಮಯೋಗಿ.

ಬನ್ನಿ ಕೆಳೆಯರೆ, ನಮ್ಮ ಬಾಳಿಕೆಯ ಕಾಣಿಕೆಯನೊಪ್ಪಿಸುವ, ಕೈಕೊಳುವ
ದೊರೆಯ ಗುರಿಯ;

ನೋಹಿಯಾತನದು–ತನ್ನರಮನೆಯ ಹಸಗೆಯ್ದು ಬೆಳಗಿದಂತೆಯೆ ಬೆಳಗಿ
ಊರ ನಾಡ,

ಹಸಗೆಯ್ಯೆ, ಹೊಸಗೆಯ್ವೆನೆಂಬೊಲುಮೆ; ನಾವೆಲ್ಲರಾ ನಾಯಕನ ದಳದಿ
ದೀಕ್ಷೆ ಪಡೆದು,

ಮಾರಿ ಬಳಸುನ ಬನ್ನಿ ಬುದ್ಧಿಯನು ಶ್ರದ್ಧೆಯನು, ಕನ್ನಡಿಗರೈಸಿರಿಯ
ಬೆಳೆಯ ಬೆಳಸಿ,

ಬೆಳೆಯುವ ನಾಡದು,
ಮೈಸೂರು.

ಇಳೆಯ ಮಾದರಿಯದು.
ಮೈಸೂರು.

ಕನ್ನಡಿಗನುಸಿರದು,
ಮೈಸೂರು.

ನಾಲುಮಡಿ ಕೃಷ್ಣನ
ಮೈಸೂರು.

(ಶ್ರೀ.)

## ಹುತ್ತರಿ ಹಾಡು

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ,
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೊ,
ಎಲ್ಲಿ ಮುಗಿಲಲಿ ಮಿಂಚಿನೊಲ್ ಕಾವೇರಿಹೊಳೆ ಹೊಳೆಹೊಳೆವಳೋ,
ಎಲ್ಲಿ ನೆಲವನು ತಣಿಸಿ, ಜನ ಮನ ಹೊಲದ ಕಳೆ ಕಳೆಕಳೆವಳೋ

ಅಲ್ಲೆ ಆ ಕಡೆ ನೋಡಲಾ !
ಅಲ್ಲೆ ಕೊಡಗಿನ ನಾಡಲಾ !
ಅಲ್ಲೆ ಕೊಡವರ ಬೀಡಲಾ !

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು,
ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು,
ಸವರಿದಾನೆಯ ಸೊಂಡಿಲಿನ ರಣಕೊಂಬನಾರ್ ಭೋರ್ಗರೆದರೋ,
ಸವೆದು ಸವೆಯದ ಸಾಹಸತ್ವದ ಕ್ಷಾತ್ರಬೇಟೆಯ ಮೆರೆದರೋ–

ಅವರು ಸೋಲ್ ಸಾವರಿಯರು !
ಅವರೆ ಕಡುಕಲಿ ಗರಿಯರು !
ಅವರೆ ಕೊಡಗಿನ ಹಿರಿಯರು !

ತಮ್ಮ ನಾಡಿನ ಕೊರಳು ದಾಸ್ಯದ ನೊಗದ ಭಾರಕ್ಕೆ ಬಗ್ಗದೊಲ್,
ಹೆಮ್ಮೆ ಹಗೆಗಳ ಹೊಡೆದು ಹಿರಿಯರು ಹಸಿದು ಹಾರುವ ಬಗ್ಗದೊಲ್,
ಬೊಮ್ಮಗಿರಿಯಿಂ ಪುಷ್ಪಗಿರಿ ಪರ್ಯಂತ ಬೆಳೆಟೀ ದೇಶವು
ಧರ್ಮದಾನದ ಕಟ್ಟುಕಟ್ಟಳೆ ರೀತಿನೀತಿಯ ಕೋಶವು !

ನಮ್ಮ ಕೊಡಗಿದು ಜಮ್ಮದು !
ಜಮ್ಮ ಕೊಡಗಿದು ನಮ್ಮದು !
ನಮ್ಮೊಡಲ್ ಬಿಡಲಮ್ಮದು!

ಇದು ಅಗಸ್ತ್ಯನ ತಪದ ಮನೆ, ಕಾವೇರಿತಾಯ ತವರ್ಮನೆ,
ಕದನ ಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದರವರ್ಮನೆ !
ಇದಕೊ ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು !
ಇದೆ ಇದೋ ಇಲ್ಲಿರುಳ್ದ ಹಾಲೇರಿಯರ ಬಲಗಿರಿ ಶೃಂಗವು !

ಬಿದಿಯು ಕೆತ್ತಿದ ಕೊಡಗಿದು !
ಮೊದಲೆ ನಮ್ಮದು; ಕಡೆಗಿದು
ಕದಲದೆಮ್ಮನು! ಬೆಡಗಿದು !

ಒಮ್ಮತವು ಒಗ್ಗಟ್ಟು ಒಂದೇ ಮನವು ಎಲ್ಲಿದೆ? ಹೇಳಿರಿ,
ಸುಮ್ಮನಿತ್ತರೊ ದಟ್ಟಿ ಕುಪ್ಪಸ? ಹಾಡು ಹುತ್ತರಿಗೇಳಿರಿ !
ಚಿಮ್ಮಿ ಪಾತುರಿ ಕೋಲು ಹೊಯ್ಲಿಗೆ ಕುಣಿವ ಪದ ಹೊರಹೊಮ್ಮಲಿ !
ಅಮ್ಮ ಹರಸಿದ ಸೀಮೆ ನಮಗಿದು; ಇರಲಿ ನಮ್ಮದೆ ನಮ್ಮಲಿ !

"ನೆಮ್ಮದಿಯನಿದು ತಾಳಲಿ"
"ಅಮ್ಮಯಾ ಬಲ ತೋಳಲಿ"
"ನಮ್ಮ ಕೊಡಗಿದು ಬಾಳಲಿ!"

(ಕವಿಶಿಷ್ಯ)

# ಗುಂಡಪ್ಪನ ಹಾಡು

ಜೋ ಜೋ ಜೋ ಜೋ ಜೋ ಜೋ ಗುಂಡಯ್ಯ !
ನೀ ಜಗದೊಳು ಬಹು ವಿಖ್ಯಾತನಯ್ಯಾ !

ಕಣಿಕೆ ಹೂರಣ ದೋಸೆ ಹಿಟ್ಟುಗಳೆಲ್ಲ
ಕ್ಷಣದೊಳು ಚೆನ್ನಾಗಿ ತಿರುವುದ ಬಲ್ಲ;
ಸೆಣಸುತ ಜನನಿಯು ಬಾದಿಪನಲ್ಲ;
ಕುಣಿಸಿದರಾಡುವುದರಿತವನಲ್ಲ.

ಸೊಂಟದ ಮೇಲ್ಗಡೆ ನಿಲ್ಲುವನಲ್ಲ;
ತುಂಟರ ಕಂಡರೆ ಸಹಿಸುವನಲ್ಲ;
ಬಂಟನು ಜಾರುತ ಬಿದ್ದರೆ ಕಾಲ
ಕುಂಟನ ಮಾಡಲು ಚೆನ್ನಾಗಿ ಬಲ್ಲ;

ತೊಟ್ಟಿಲು ಬೇಕೆಂದು ಕಾಡುವನಲ್ಲ;
ಹೊಟ್ಟೆನ ಮೂಲೆಯೊಳ್ಮಲಗಲು ಬಲ್ಲ;
ಪೆಟ್ಟಿಗೆ ಬಟ್ಟೆಯು ಕೇಳುವನಲ್ಲ;
ಹುಟ್ಟಿದರಿವನಂತ ಮಗು ಕಷ್ಟವಿಲ್ಲ.

ಸುಣ್ಣದ ಬೊಟ್ಟುಗಳಿಟ್ಟರೆನ್ನಪ್ಪ
ಕಣ್ಣಿಗೆ ಬೀಳುವ ಭಯವಿಲ್ಲವಪ್ಪ;
ಸಣ್ಣ ಕೂಸಂದೆತ್ತೆ ದೊಡ್ಡ ಬೂತಪ್ಪ !
ಬಣ್ಣಿಸಲಾರೆನಾ ನಿನ್ನ ಗುಂಡಪ್ಪ !

ಜನನಿಯು ತೊಡೆಯೊಳು ಗುಂಡನನಿಟ್ಟು,
ವನಿತೆಯರೆಲ್ಲರು ಸಡಗರಬಟ್ಟು,
ವನಜಾತನಯನನ ತೊಟ್ಟಿಲೊಳಿಟ್ಟು,
ವಿನಯದಿ ತೂಗಿದರಾನಂದಬಟ್ಟು.

(ಕಡೂರು ರಂಗಶಾಸ್ತ್ರಿ—ಗೀತಕಲ್ಪಾಂಕುರ)

## ಅಟ್ಟುಳಿ

ಕದವರದಾರಿನ್ನ
ಮುದ್ದುಗೂಸಿನ ಕಣ್ಣ
ನಿದ್ದೆಯನ್ನು ಮಲಗಿಸುತಲಾನು ಪೋಗೆ?

ಎದ್ದು ಕಾಲ್ಗೆಜ್ಜೆಯಿಂ
ಸದ್ದು ಮಾಡದೆ ಬಂದು
ಮೆದ್ದು ನವನೀತಮಂ ನಗುವನಲ್ತೆ!

ಏನನೆಸಗಿದೆಯೆಂದು
ನಾನು ಬೆದರಿಸಿ ನುಡಿಯೆ,
ಸಾನುರಾಗದಿ ಬಂದು ಮುತ್ತಿಕ್ಕುವ

ಆ ನೆವದಿ ತರಳನು ಮು
ದಾನನದಿ ನವನೀತ
ವನ್ನು ಹತ್ತಿಸಿ ನೋಡಿ ನಗುವನಲ್ತೆ!

ನಿದ್ದೆ ಬರುವುದು, ಕಂದ
ಸದ್ದು ಮಾಡಿದಿರೆಂದು
ಮುದ್ದಿಟ್ಟು ಮಲಗಲ್ಕೆ, ಸುಮ್ಮನಿರದೆ,

ಅದ್ದಿ ನೀರೊಳು ಕೈಯ
ನೊದ್ದೆಗೈಯ್ಯಂ ತಂದು
ಸದ್ದು ಮಾಡದೆ ಮೊಗದೊಳಿಡುವನಲ್ತೆ!

ಗುಮ್ಮನಿಗೆ ಕೊಡುವೆನೆಂ
ದೊಮ್ಮೆ ನುಡಿಯಲ್ಕಾನು,
ಗುಮ್ಮ ನಾಂ ಗುಮ್ಮ ನಾನೆಂದು ನುಡಿದು,

ನೆಮ್ಮಿ ಮಮದೇಹಮಂ
ಮೇಲುದಂ ಮುಸುಕಿಟ್ಟು
ಗುಮ್ಮನೊಲ್ಲು ಕೂಗುವನ್ನು ತರಳನಿವನು.

ಕರಿಗೂಸು ನೀನೆಂದು
ಜರಿದು ನುಡಿಯಲ್ಕಾನು
ಕರಿಬಣ್ಣವಂ ನಿನಗೆ ಹತ್ತಿಸುವೆನೆಂ
ದೊರೆದು ಬಲು ಬೇಗದಿಂ
ಪರಿತಂದು ದೆಸೆದೆಸೆಗೆ
ಹರಿಸುವನು, ಸಿಗದಿರಲ್ಕಳುವನಿವನು,

ಮುಟ್ಟದಿರು ನೀನೆಂದು
ಸಿಟ್ಟಿನಿಂ ನುಡಿಯಲ್ಕೆ,
ಪುಟ್ಟ ಕೈಯಿಂ ಮೊಗವ ಮುಚ್ಚಿ ನಿಂದು,
ಕೆಟ್ಟ ದನಿಯಿಂದಳುವ
ಧಿಟ್ಟತೆಯ ಬಾಲನಿವ
ನಟ್ಟುಳಿಯ ಸೈರಿಸಲ್ಕಾರ್ತನಿಲ್ಲ.

(ಎಸ್. ವಿಷ್ಣು ಭಟ್ಟ—ಜಯ ಕರ್ಣಾಟಕ)

---

## ಎನ್ನ ಮುದ್ದಿನ ಗಿಣಿಯೆ!

ಎನ್ನ ಮುದ್ದಿನ ಗಿಣಿಯೆ! ಎನ್ನ ಸೊಬಗಿನ ಕಣಿಯೆ!
ಎನ್ನ ಭಾಗ್ಯದ ಸಿರಿಯೆ! ಚೆಲುವಿನ ಕುವರಿಯೆ!
ನಿನ್ನ ಜನನದ ದಿನಕೆ—(ಚೆನ್ನಾಯ್ತು ಲೆಗೆ! ಮನಕೆ
ಸನ್ನುತವೆ? ತಡೆ ಮಗಳ ಈ ಕಿರುಕುಳಗಳ.)

ಬಾರೆನ್ನ ಮನೆ ಬೆಳಗೆ! ಸಾರು ಬೇಗನೆ ಬಳಿಗೆ;
ತೋರು ನಿನ್ನಯ ಮೊಗವ; ಬೀರೆನಗೆ ಸೊಗವ.
ಮೀರಿಹುದು ಸುಖವಿಂದು – (ಯಾರೆ? ಬೇಗನೆ ಬಂದು
ನೀರ ಬಿಂದಿಗೆ ಎಳಕೊ! ಹೊ! ಕವಚಿದಳಕೊ!)

ಕಂದ! ಜನನದ ದಿನದ ಸಂದ ನಿನ್ನಯ ಬಿನದ
ದಿಂದ ನಲವಾಂತುದೆದೆ ಬಂದಪ್ಪು ಮುದದೆ,
ನಿಂದು ನೋಡುವುದೇಕೆ?—(ಮುಂದೋಡಿದಳು! ಜೋಕೆ!
ಸುಂದರಿಯೆ! ಪೋಪೋಗು! ಹಾಕಿದಳು ಆಗು!)

ಮಗಳೆ! ಮಾಣಿಕಗೊಂಬೆ! ತೆಗೆದು ತಕ್ಕಿಸಿಕೊಂಬೆ!
ನಗುನಗುತ ಬಾರೆನ್ನ ಬಗೆಗೊಳಿಪ ರನ್ನ!
ಸಿಗಲಾರೆಯಾ ನನಗೆ—(ತಿಗೆದಳಿದೊ ಕಿರುಮನೆಗೆ
ತೆಗೆದೆನ್ನ ಮಸಿಕುಡಿಕೆ! ಬೇಗವಳ ಹುಡುಕೆ!)
ಪುಟ್ಟಮ್ಮ! ನೀ ಮುತ್ತ ಕೊಟ್ಟೆನ್ನನಪ್ಪುತ್ತ
ಹುಟ್ಟು ದಿನದುಡುಗೊರೆಯ ಪಡೆಯಬಹುದರಿಯ!
ತಟ್ಟನಿಲ್ಲಿಗೆ ಬಾರೆ—(ಬೊಟ್ಟಿಟ್ಟವಳ ಮೋರೆ
ನಿಟ್ಟಿಸಲೆ ಮನದನ್ನೆ! ಮಸಿಗಾಯ್ತು ಸೊನ್ನೆ!)
ಅಮ್ಮಣ್ಣಿ! ಬಾ, ನಿನ್ನನೊಮ್ಮೆ ತಬ್ಬುವೆ, ಚಿನ್ನ!
ಸಮ್ಮಾನವಹುದಿಂದು ಜನ್ಮದಿನವೆಂದು.
ಸಮ್ಮುಖಕೆ ಬಾ, ಪುರುಳೆ!—(ಸುಮ್ಮನಿರಳೀ ತರಳೆ;
ಗುಮ್ಮನೆಂದಿದೊ ಬಂದಳೇನದರ ಚಂದ!)
ಕಡುಬೆಡಗಿನೆಲೆ ಬಾಲೆ! ಇಡುವೆ ಮುತ್ತಿನ ಮಾಲೆ
ಬಿಡೆನಿದಕೊ ಸಿಕ್ಕಿದಳು! ಮುತ್ತನಿಕ್ಕಿದಳು!
ಒಡನೆ ಮುದ್ದಾಡಿದೆನು—(ಮಡದಿಮಣಿ, ನೋಡಿದಳು.
ಬೆಡಗಲ್ಲವೇ ಪೇಳೆ ಮುತ್ತಿನೀ ಮಾಲೆ?)

(ಉ. ಮ. ರಾ)

---

## ಎನ್ನ ಮುದ್ದು ಲಲಿತೆ

ಅರಳಿ ಹೂವಾಗದೆಯೆ, ಪರಿಮಳವ ಬೀರದೆಯೆ,
ಬರಿಯೆಳೆಯ ಮೊಗ್ಗಾದ ಸಂಪಿಗೆಯು ತಾಂ
ಬಿರುಗಾಳಿ ಹೊಡೆತದಿಂ ನೆರೆ ಕಳಚಿ ಬೀಳುವಾ
ತೆರದಿ ಪೋದೆಯ? ಎನ್ನ ಮುದ್ದು ಲಲಿತೆ!
ಗರಿ ಬಲಿಯದಿಹ ಮುನ್ನ ಮರಿಕೋಳಿ ತನ್ನ ತಾ
ಯ್ನೆರೆಯೊಳೇ ಅಲ್ಲಲ್ಲಿ ತಿರುಗುತಿರಲು,
ಭರದಿ ಹದದು ಬಂದು ಮರಿಯ ಪಿಡಿದೊಯ್ಯುವಾ
ಪರಿಯಾಯ್ತೆ? ಹಾ! ಎನ್ನ ಮುದ್ದು ಲಲಿತೆ!

ಕೋಗಿಲೆಯ ದನಿಯಂತೆ ಕೇಗುಹಾಕುವ ನಿನ್ನ
ರಾಗವಂ ನಾನಿನ್ನು ಕೇಳ್ವುದೆಲ್ಲಿ?
ತೂಗುದೊಟ್ಟಿಲನು ಬರಿದಾಗಿಸಿಯೆ ನೀನಿಂತು
ಪೋಗುವುದೇ? ಹಾ! ಎನ್ನ ಮುದ್ದು ಲಲಿತೆ!

ನಗುಮೊಗವದೆಲ್ಲಿ? ಆ ಬೊಗಸೆಗಣ್ಣುಗಳೆಲ್ಲಿ?
ಚಿಗುರನಣಕಿಪ ಮುದ್ದು ತುಟಿಗಳೆಲ್ಲಿ?
ಮಗಳೆ! 'ಲಲಿತಾ' ಎಂದು ಮಿಗೆ ಮುದದೊಳಿನ್ನಾರ
ಜಗದಿ ಕೂಗಲಿ? ಎನ್ನ ಮುದ್ದು ಲಲಿತೆ!

ನಿನ್ನ ತಾಯಿಯ ಬಿಟ್ಟು ನೀನೆಲ್ಲಿ ತೆರಳಿದೇ?
ನಿನ್ನ ತಾಯಳುತಿಹಳು; ಕಿವಿ ಕೇಳದೆ?
ನಿನ್ನ ತಾಯಿಡುತಿರುವ ಕಣ್ಣೀರು ಹೊಳೆಯಾಯ್ತು!
ಇನ್ನಾದರೂ ಬಾರೆ— ಮುದ್ದು ಲಲಿತೆ!

ಪಾಪಮಯವಾದ ಭೂವ್ಯಾಪಾರವಿದ ನೋಡಿ
ಹೇ ಪುಣ್ಯವತಿ ನಿನಗೆ ಬೇಸರಾಯ್ತೆ?
ತಾಪತ್ರಯಗಳಿಲ್ಲದಾ ಪುಣ್ಯಲೋಕಕ್ಕೆ
ನೀ ಪೋದೆಯಾ? ಎನ್ನ ಮುದ್ದು ಲಲಿತೆ!

ವಾರಿಧಿಯ ನೀರು ತಾಂ ವಾರಿದವು ತಾನಾಗಿ,
ಭೂರಿವರ್ಷವದಾಗಿ, ನದಿಯುಮಾಗಿ,
ವಾರಿಧಿಯನೇ ಸೇರ್ವ ರೀತಿಯೊಳೆ ನೀಂ ಬಂದ
ಊರ ಸೇರ್ದೆಯ? ಎನ್ನ ಮುದ್ದು ಲಲಿತೆ!

ಒಂದು ದಿನ ನಾವುಗಳು ಬಂದಪೆವು ಸಂತತಾ
ನಂದದಾಯಕವಾದ ಪುಣ್ಯಭುವಿಗೆ;
ಅಂದು ನೀನೇ ಮುಂದು ಬಂದು ಸುಸ್ವಾಗತವ
ಚಂದದಿಂ ಕೊಡು— ಎನ್ನ ಮುದ್ದು ಲಲಿತೆ!

**(ಕೋಲಾರ ಸೂರ್ಯನಾರಾಯಣ ಶಾಸ್ತ್ರಿ).**

# ಚಂದ್ರಮತಿ ವಿಲಾಪ

ಏನೇನೇನೆಲೆ ಮಗನೇ ಮಗನೇ!
ಸಾವೇಕಾಯಿತ್ತೆಲೆ ಚೆನ್ನಿಗನೇ!

ಇರಿದೆಯಲಾ ಎನ್ನನು ಸುಕುಮಾರಾ!
ತೊರೆಯಲಾ ಎನ್ನನು ಜಿತಮಾರಾ!
ಹಾವು ಹಿಡಿಯೆ, ಹಾಯೆಂದೆಯೊ ಕಂದಾ!
ಸಾವಾಗವ್ವಾಯೆಂದೆಯೊ ಕಂದಾ!

ನೊಂದೆನು ಬೆಂದೆನು ಕಂಡಿದೆ ಮಗನೇ!
ಕುಂದಿದೆ ಕುಗ್ಗಿದೆ ಮುಗ್ಗಿದೆ ಮಗನೇ!
ರನ್ನದ ಕನ್ನಡಿಯೊಡೆದುದೊ ದೇವಾ!
ಹೊನ್ನಕಳಸ ಕೆಡೆದುದೊ ಎಲೆ ದೇವಾ!

ಎನ್ನಯ ಕಡವರಂ ಸೂರೆಹೋಯ್ತು;
ಚಿನ್ನದ ಪ್ರತಿಮೆಯುಸಿರು ಹರಿಹೋಯ್ತು.
ಸಾಹಿತ್ಯದ ಸಾಗರವರಿಯಿತ್ತು;
ಆಹ! ರತುನಕಂಭವು ಮುರಿಯಿತ್ತು;

ಇನವಂಶದ ಲತೆಗುಡಿ ಮುರಿಯಿತ್ತು;
ಜನಪನ ಸುರತರು ಕುಡಿಯುಡಿಯಿತ್ತು.
ಕಾಲ! ಕರುಣೆಯಿಲ್ಲದೆ ನೀನೊಯ್ದೆ,
ಬಾಲನನೆಳದಿಂ ಕೊರಳನು ಕುಯ್ದೆ.

ಆರಿಗೆನ್ನನೊಪ್ಪಯಿಸಿದೆ ಕಂದಾ?
ಆರ್ಯೆಯುಟೆ ಹೋಹರೆ ಗುಣವೃಂದಾ?
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ;
ಎತ್ತಿದ ತೋಳನನು ಕೆತ್ತಿದೆ ಮಗನೆ.

ಹಾಡುವ ಬಾಯೊಳು ಮಣ್ಣನು ಹೊಯ್ದೆ;
ನೋಡುವ ಕಣ್ಣೊಳು ಸುಣ್ಣವ ಹೊಯ್ದೆ.
ಹೆಚ್ಚಿದ ಹರುಷವ ಕೊಚ್ಚಿದೆ ಮಗನೆ;
ನೆಚ್ಚಿದ ಮನವನು ಚುಚ್ಚಿದೆ ಮಗನೆ.

**ಪಾಪಿಯೆನ್ನೆನಿನೊಯ್ಯನೆ ನೋಡಾ,**
**ಕೋಪವನುಳಿದೊಯ್ಯನೆ ಮಾತಾಡಾ.**
ನುಡಿದರೆ ಪಾಪವೆ ಹೆತ್ತವರೊಡನೆ?
ಕಡು ಮುನಿಸೇಕೆಲೆ ಮಗನೆನ್ನೊಡನೆ?
ಧರೆಯ ಸಿರಿಯು ಸಂಪತ್ತನು ಬಿಟ್ಟು,
ಅರಸಿನ ಸತ್ಯಕ್ಕೇ ವಿಧಿವಟ್ಟು,
ಅನ್ಯರ ಮನೆಯಲಿ ತೊತ್ತಾಗಿರ್ದು,
ನಿನ್ನ ನೋಡಿ ಪರಿಣಾಮದೊಳಿರ್ದು,
ಇರ್ದೆನ್ನನು ನೀನಿರಿವರೆ ಕಂದಾ?
ತಪ್ಪಿದೆ ಮಗನೇ ವಿಧಿವಶದಿಂದ.
ಬಾರೈ ಬಹಳ ಸಿರಿಯು ಸಿಂಗಾರಾ!
ಬಾರೈ ಸುಜನ ಜನಕ್ಕಾಧಾರಾ!
ಬಾರೈ ಬಳಲಿದೆ ಎಲೆ ಜಿತಮಾರಾ!
ಬಾರಳಲಿಸದೆನ್ನನು ಸುಕುಮಾರಾ!
ಮುದ್ದುತನದ ಮೋಹದ ಮುಂಗುಡಿಯೇ
ಎದ್ದಪ್ಪೆನ್ನನು ಎಳಲತೆಗುಡಿಯೆ!
ಏಳೆನ್ನಾನಂದಾಮೃತಶರಧಿಃ
ಏಳಖಿಳ ಗುಣಾರ್ಣವ ಕಳಾನಿಧಿ!
ದೇಸಿಗನಾಗಿ ನೀನಡವಿಯೊಳಳಿದೆ
ದೇಶಾಧಿಪರ ಮೇಲೆತ್ತಿ ನಡೆಯದೆ.
ಧರೆಯನಾಳ್ವ ಸಿರಿಯಂ ಕಳೆದಿಂದು,
ಉರಗನ ವಿಷದಗ್ನಿಯೊಳುರೆ ಬೆಂದು,
**ಅಡವಿಯೊಳೀ ಪರಿ ಕೆಡೆವರೆ ವೀರಾ!**
**ಪೊಡವಿಯೊಡೆಯನಗ್ಗದ ಸುಕುಮಾರಾ!**

(**ರಾಘವಾಂಕ— ಹರಿಶ್ಚಂದ್ರ ಕಾವ್ಯ**)

## ಎಲ್ಲಿಂದ ಹೇಳಮ್ಮ ನಾನಿಲ್ಲಿ ಬಂದೆ?

ಎಲ್ಲಿಂದ ಹೇಳಮ್ಮ ನಾನಿಲ್ಲಿ ಬಂದೆ?
ಎಲ್ಲಿಂದ ನೀನೆನ್ನ ಕಂಡು ಕರೆತಂದೆ'?
ಮೆಲ್ಲುಲಿಯನಾಲಿಸುತ ಬಾಲಕನ ತೊದಲಾ,
ಸಲ್ಲಲಿತೆ ಪೇಳತೊಡಗಿದಳು ತುದಿಮೊದಲಾ,
ಗಲ್ಲವನು ಸವರಿ, "ಬಯಕೆಯದಾಗಿ ಮುನ್ನಾ,
ಇಲ್ಲಿ ಹೃದಯದೊಳಿದ್ದೆ, ಬಲುಮುದ್ದು ಚಿನ್ನಾ!

"ನೀನಿದ್ದೆ ಚಿಕ್ಕಂದಿನಾಟಗಳೊಳಿನ್ನಾ,
ನಾನಾ ಪರಿಯ ಗೊಂಬೆಬೊಂಬೆಯಲಿ, ಮುನ್ನಾ
ಸಾನುರಾಗದಿ ತೊಟ್ಟಿಲನು ತೂಗೆ ನಾನು,
ಆನಂದವನು ತಳೆದ ಪುತ್ತಳಿಯೆ ನೀನು.
ನಾನು ಪೂಜಿಸುತಿರಲು ಕುಲದೇವರನ್ನಾ
ನೀನೆ ಮೂರ್ತಿಯೊಳಿದ್ದೆ, ಬಲುಮುದ್ದು ಚಿನ್ನಾ!

"ಮನಸಿನೊಳಗೇಳ್ವ ಸವಿಕೋರಿಕೆಯೊಳೆಲ್ಲಾ,
ಅನುಮಾನವೆನ್ನ ಮಹದಾಶೆಯೊಳಗೆಲ್ಲಾ,
ಜನನಿಜನಕರ ಹಿರಿದು ಲಾಲಸೆಗಳೆಡೆಯೊಳ್,
ಮನೆತನದೊಳಾಳ್ವ ಗೃಹಲಕ್ಷ್ಮಿ ತಾಯ್ಪೊಡೆಯೊಳ್,
ಇನಿಸಿನಿಸು ಕಾಣಿಸದೆ, ಬಹುಕಾಲದಿಂದಾ
ತನುವನಡಗಿಸಿದೆ ನೀಂ, ಬಲುಮುದ್ದು ಕಂದಾ!

"ಸಮನಿಸುತ್ತಿರೆ ನನಗೆ ಯೌವನಾಭ್ಯುದಯಂ,
ಕಮಲದಂತರಳುತಿರೆ ದೇಹದಲಿ ಹೃದಯಂ,
ಸುಮದಿ ಸುಮಧುರ ಸುರಭಿಯಂತಿರ್ದು, ನೀನು
ಮಮ ಯುವತಿರೂಪಾತಿಶಯಗಳಿಗದೇನು
ರಮಣೀಯ ಮೃದುಕೋಮಲತೆಯಿತ್ತೆ ನಿನ್ನಾ
ಮಮತೆಯಿಂ; ತಿಳಿಯೆದಲೆ, ಬಲುಮುದ್ದು ಚಿನ್ನಾ!

ಭಾವಿಸಲು, ಸಚ್ಚಿದಾನಂದಸಾಗರದಿ
ಭೂವಲಯುದಃದಿಯುಲಿ ಜನಿಸಿ, ಸಡಗರದಿ
ಆವಗಂ ಮಮಹೃದಯುದೊಡನಾಡೆ ಬಂದಾ
ಜೀವಾತ್ಮನಲ್ತೆ ನೀಂ, ಬಲುಮುದ್ದು ಕಂದಾ!
"ಮೊಗವ ನೋಡಲು ನಿನ್ನ, ನಿನ್ನಯು ರಹಸ್ಯಂ
ಮಿಗಿಲಹುದು, ತಿಳಿಯುದೈ; ನೀನೆನಗೆ ವಶ್ಯಂ
ಸಿಗುವುದೆಂಬಾ ಮಾತು ಸಾರ್ಥಕವು ಹೇಗೆ,
ಜಗದಿ ಸಕಲರಿಗೆ ಸೇರಿದ ಜೀವನಾಗೆ?
ಮಗನೆಂದು ಮುದ್ದಿಡುವೆ ನಿನ್ನ ಮುದದಿಂದಾ—
ನಗುನಗುತ ಬಾರಯ್ಯ, ಬಲುಮುದ್ದು ಕಂದಾ!"
"ಗಳಿಗೆಯುಂ ಪೋಗೆ ತೋರದೆ ನೀಂ ಭವನದಿ,
ಕಳೆದೆ ನಿನ್ನನ್ನೆಂದು ಕಳವಳಿಸಿ ಮನದಿ,
ಅಳುತೆದೆಗೆ ಬಿಗಿದಪ್ಪಿ ಹಿಡಿವೆ ನಿನ್ನನ್ನಾ!
ಇಳೆಯು ದುರ್ಲಭಿ ವಸ್ತುವನು ನಿನ್ನನೆನ್ನಾ
ಎಳೆತೋಳ್ಗಳಾವ ಮಾಯಾಜಾಲದಿಂದಾ
ತಿಳಿಯೆ ಸೆರೆಗೊಳಿಸಿದುವು, ಬಲುಮುದ್ದು ಕಂದಾ!"

(ಮಂ. ಅನಂತರಾವ್)

---

## ಡೊಂಬರಾಟ

ಶ್ರುತಿಯು ಕೇಳಿಸಲಖಿಲ ಜನರು ಕೂಡಿದರು;
ಅತಿ ವಿಚಿತ್ರದಿ ಡೊಂಬರಾಟವಾಡಿದರು.
ಹಿರಿಯ ಡೊಂಬನು ಬಹಳ ಜಾಣನವರೊಳಗೆ,
ಬೆರಗುಮಾಡಿದನೆಮ್ಮನರಗಳಿಗೆಯೊಳಗೆ.
ತೋರ ಸರ್ಪವನೊಂದು ಪುಟ್ಟಿಯೊಳಗಿಂದ
ತೋರಿ, ಕುಣಿದಾಡಿಸುವೆನದನೀಗಳೆಂದ.
ಓಡಿ ಹೋದರು ದೂರ ಬಾಲಕರು ಕೆಲರು,
ನೋಡಬೇಕೆನುತ ಬಳಿಸಾರಿದರು ಹಲರು,

ಬಡಿಯೆ ಡೋಲನು, ಶ್ರುತಿಯನೂದಿದನು ಡೊಂಬಂ:
ಹೆಡೆಯೆತ್ತಿ ಕುಣಿಯಿತದನೀಗಳೆನೆಂಬೆಂ?
ಗೊರಟನೊಂದನು ತೋರಿ ಬೊಂತೆಯೊಳಗಿಡಲು.
ಹೊರಟಿತಲ್ಲಿಂದ, ಜನರಾಶ್ಚರ್ಯಪಡಲು,
ತಳಿರಿಂದ ಕಂಗೊಳಿಪ ಪುಟ್ಟಮರವೊಂದು,
ಭಳಿರೆ! ಭಾಪುರೆಃ ಎಂದು ಜನರೆಂದರಂದು.
ಭೆತ್ತದಾ ಪೆಟ್ಟಿಗೆಯೊಳೊಬ್ಬನನು ಹುಗಿದು,
ಸುತ್ತಿದನು ಹರಿಹಗ್ಗದಿಂದದನು ಬಿಗಿದು;
ಕತ್ತಿಯಿಂ ತಿವಿದು ಜನರಿಗೆ ನೋಡಿರೆಂದಾ;
ಮತ್ತೆ ಕರೆದಾಗ ಸತ್ತವನೋಡಿ ಬಂದಾ.
ಮಗನಿಂತು ಬಣ್ಣಿಸಲು ಡೊಂಬರಾಟವನು—
ತೆಗೆ! ವಿಚಿತ್ರವಿದಲ್ಲ; ದೇವರಾಟವನು
ಕೇಳಿದರೆ ನೀನೇ ವಿಚಿತ್ರತಮವೆಂದು
ಹೇಳುವೆಯೆನುತ್ತ ತಾತನು ಪೇಳ್ದನಂದು.
ದೇವರನು ನಾಗಭೂಷನೆಂದು ಕರೆವರ್.
ಸಾವಿರ ಹೆಡೆಯ ಹಾವೊಳೊರಗುವವನೆಂಬರ್
ಅಂತಿರಲು ಹಲ್ಗಳಿಲ್ಲದ ಹಾವನಾತಂ
ಮುಂತೆಂದು ಕುಣಿಸಲ್ಕದೆಂತೋ ವಿಚಿತ್ರಂ?
ಧರೆಯೊಳಗೆ ಕಂಗೊಳಿಪ ವಸ್ತುಗಳನೆಲ್ಲಂ
ವಿರಚಿಸಿದನಾತನೇ! ಡೊಂಬನೇಂ ಬಲ್ಲಂ?
ಮೊದಲೆ ಬಟ್ಟೆಯೊಳಡಗಿಸಿದ ಗಿಡಪನಾತಂ
ತುದಿಯೊಳೆಮಗದಸೆ ತೋರಿಪನಲ್ಲ ಪೆರತೇಂ?
ಹುಟ್ಟುವೆವು, ಮೆರೆಯುವೆವು, ಬಳಿಕ ಸಾಯುವೆವು,
ಥಟ್ಟನಿನ್ನೊಂದು ಕಡೆಯಲ್ಲಿ ಜನಿಸುವೆವು;
ಜಗದೊಡೆಯನಾಟವಿದು, ಕೇಳು, ಮನವಿಟ್ಟು,
ಮಗನೆ! ಡೊಂಬರ ಆಟವದು ಕಣ್ಣು ಕಟ್ಟು!

(ಉ. ಮ. ರಾ.)

## ನೀತಿ

ಹೊಲೆಯನೆನ್ನುತೆ ದೂರ
ಹಾರಬೇಡ.
ಹೊಲೆಬರದು ಹೊರಗಿಂದೆ,
ಒಳಗಡೆಯೆ ಇಹುದೆಂದು
ತಿಳಿದ ದಾಸರು ಎಲ್ಲ
ಸಾರಿರುವರು–
ಹೊಲೆಯನನು ಹೊಲೆಯೆಂದು
ದೂರಬೇಡ.

ಜಾತಿ ಬರಿ ಹುಟ್ಟಿಂದೆ
ಬರುವುದಿಲ್ಲ.
ಮೇಲಾದ ನಡತೆಯಿಂ
ಮೇಲಹುದು ಜಾತಿಯುಂ,
ಕೀಳು ನಡೆಯಿಂ ಜಾತಿ
ಕಿರಿದಪ್ಪುದು.
ನೀತಿಯನು ಬಿಡದಿಹುದು
ಹಿರಿಯ ಜಾತಿ.

ಬದುಕಬಾರದೆ ಬಾಳ
ಹಳಿಯ ಬೇಡ.
‘ ಈಸಬೇಕು, ಇದ್ದು
ಜೈಸಬೇಕು’ ಎಂದು
ದಾಸರಾಡಿದ ಮಾತ
ತಿಳಿದು ಬದುಕು.
ಎದೆಮಾಡಿ ತಾಮಸವ
ನಳಿದು ಬದುಕು.

ಜನ ಪೊಗಳದೆಂದು ನೀ
ಮರುಗಬೇಡ.
ಪೊಗಸುವುದು ಪಿರಿದಲ್ಲ;
ತೆಗಳುವುದು ಪಿರಿದಲ್ಲ;
ನೆಗಳಲೆಲ್ಲಕೆ ಪಿರಿದು—
ಅರಿದು ನಿಜವ
ಮನದ ಅಭಿಮಾನವನು
ತೊರೆ ಜವದಲಿ.

ದೈವ ಕೊಟ್ಟುದ ಕೊಡದೆ
ಹುಗಿದಿಡದಿರು.
ಮಳೆಯಾಗಿ ಸುರಿದ ಜಲ,
ಹೊಳೆಯಾಗಿ ಸಾಗರಕೆ
ಇಳಿಯೆ ಕರೆಯುಲು ಮತ್ತೆ
ಮುಗಿಲಪ್ಪುದು,
ಆವುದಲ್ಲಿಯೆ ನಿಲಲು
ಮಿಗೆ ಕೆಡುವುದು.

(ಮಾ. ವೆಂಕಟೇಶ ಅಯ್ಯಂಗಾರ — ಅರುಣ.)

---

## ನಗುಮೊಗವ ತಳೆದಿರಲು ನಗುತ ಬಳಿಗೈದುವರು

ನಗುಮೊಗವ ತಳೆದಿರಲು ನಗುತ ಬಳಿಗೈದುವರು;
ದುಗುಡದಿಂದುಳರಲು, ಗಮನಿಸುವರಿಲ್ಲ!
ಸೊಗವ ಹೆರವರ ಬೇಡಿ ತೆಗೆದುಗೊಂಡುಣಬೇಕು,
ಜಗದೊಳಂತೆಯೆ ಸಿಗುವ ದುಃಖವದು ಸಲ್ಲ!
ಹಾಡಿದೊಡೆ, ಪಡಿನುಡಿಯು ಕಾಡುಗುಡ್ಡಗಳೆಲ್ಲ
ತೀಡಿ ಸಂತಸದಿ, ಬೀರ್ವುವು ಬೀಗಿ ಕೂಗಿ;
ಕಾಡತಿಹ ಮನದಳಲ ಪೀಡೆಯಾ ನಿಟ್ಟುಸಿರ
ಪಾಡು ಪೋದಪುದಡಗಿ ಗಾಳಿಪಾಲಾಗಿ!

ಸಂತಸಂಬಡೆ, ನಿನ್ನನಂತೆ ಆಶ್ರಯಿಸುವರು;
ಚಿಂತಿಸಲು, ನಿನ್ನ ತೊರೆದತ್ತ ಸಾರುವರೈ!
ಸಂತಸದ ಪಾಲು ಬೇಕಂತೆ, ಸಾಲದು! ಚಿಂತೆ
ಯಾಂತು ಬದುಕುವುದೆಂತು? ಬೇಡವೆನ್ನುವರೈ!
ಸ್ವೀಕರಿಸೆ ಮೋದದೊಳನೇಕ ಗೆಳೆಯರು ಬಹರು;
ಶೋಕದೊಳ್ಗೆಳೆಯರುಂ ವಿಮುಖರೈ ಮಹಿಯೊಳ್!
ನೀ ಕೊಟ್ಟ ಸಿಹಿ ಸೊಗವ ಬೇಕೆಂದುಣುವ
ರೇಕಾಂತದುಣಬೇಕು ವ್ಯಾಕುಲದ ಕಹಿಯೋಳ್!
ಪಡೆದ ಸುಗ್ಗಿಯ ದಿನದಿ, ಕೊಡಲೌತಣವ, ನೆರೆದು
ಸಡಗರದಿ ಬಂದು ಸೇರುವರು ಜನರೆಲ್ಲಾ!
ದುಡಿಯಲಾರದೆ ಬಳಲುತೊಡಲಿನುಪವಾಸದಿಂ
ಮುಡಿವಂದು ಕಣ್ಣಿಟ್ಟು ನೋಳ್ಪರಾರಿಲ್ಲ!
ಎಂದು ಸಿರಿಮೆರೆದಿಹುದೊ, ಅಂದು ನೆಂಟರಿಮಿಷ್ಟ
ರೆಂದು ಸಂದಣಿಸಿ ಸುಖಿಸುವರು; ಹೆಚ್ಚೇಕೈ?
ಬಂದ ಸಂಪದವಾರೆ, ದಂದುಗಂ ಮೀರೆ, ನೀ
ಸಂದುಗೊಂದಿನೊಳೊಬ್ಬನೇ ನರಳಬೇಕೈ!

(ಮಂ. ಅನಂತರಾವ್)

---

## ಹಿತವಾದ

ಮೊಗದಿಂದಲೊಳ್ಳಿತಾಗಿಯೆ ಸೂಸುತಿರುವ
ನಗೆಯಿಂದಲೂ ಮಾತಿನಿಂದಲೂ ಜನವ
ಬಗೆಗೊಳ್ಳದಿರು ಸುಜನನೆಂದು; ಹೊಂಡದೊಳು
ನಗುವ ತಾವರೆಗಾಗಿ ಹಾರದಿರು, ಕೇಳು!
ಎರಡು ಕಿವಿಯಂ ಕೇಳೆ, ನಾಲಗೆಯನೊಂದಂ
ಕರುಣಿಸಿರುವಂ ನುಡಿಯೆ ಬೊಮ್ಮನಿದರಂದಂ,
ನರನೆ, ತಿಳಿಯದೆ ಕೇಳ್ದುದೆಲ್ಲವಂ ಬಿಟ್ಟು,
ಮರುಗುವೆ ಕಡೆಗೆ, ಸೆರಗಿನೊಳು ಗಂಟುಕಟ್ಟು!

ಮೂಸಿ ಪರಿಮಳವನಾ ಮೇಲೆ ಗಾಳಿಯುನು
ಸೂಸುವರು ಹೊರಗೆ; ತಿಳಿಯುತ್ತದನು ನೀನು
ಮೋಸ ಹೋಗದಿರು ಸತ್ಯದ ಮಾತಿದೇನುತ
ಸಾಸದಿಂ ಸಿಕ್ಕಿದಾತನ ಕಿವಿಯೊಳಿಡುತ.

ತನ್ನ ಹೊಟ್ಟೆಯನೆ ತುಂಬಿಸನನ್ನು ಸೇರಿ,
ಬನ್ನಬಡದಿರು, ಕಡ್ಡಿ ಮುರಿದೆಂಬೆ ಸಾರಿ!
ಚೆನ್ನಾಗಿ ನೀರ್ತುಂಬಿದೊಟ್ಟೆದೋಣಿಯನು,
ಎನ್ನಯ್ಯ, ಹತ್ತಲಹುದೇ ಹೇಳು ನೀನು?

ಆರುಮಿಲ್ಲದ ಕಾಲದೊಳು ನೀನೆಯರಸು!
ಬೇರೆ ತನ್ನವರು ಸಿಕ್ಕಲು ತುತ್ತನರಸು;
ಈ ರೀತಿಯಿಂದಿರುವನನ್ನೊಡೆಯನೆನುತಂ
ಸೇರದಿರು; ಕಾಲದೊಳು ತಲೆಯೊಡವನಾತಂ

ಒಂದು ಹಲವಿರೆ ಲಕ್ಷವಹುದು, ಲಕ್ಷದೊಳು
ಒಂದೇನು ಲಕ್ಷವಾಗುವುದೆ, ನೀ ಹೇಳು!
ಸಂದ ಹಲವುಂ ಬಡವರಿಂ ಧನಿಕನೆನಿಸಿ,
ಬಂದವಂ ನಿನ್ನನೇಂ ನೋಡುವನೆ ಗಣಿಸಿ?

ಮಾನಧನನಾದರೆನ್ನಂ ಗಣಿಸರೆಂದು
ನೀನು ಚಿಂತಿಪುದೆ? ಕುರುಡರು ನೋಡದಂದು
ಹೀನತೆಯೆ ಕನ್ನಡಿಗೆ? ಮಾನವಿಲ್ಲದಿರೆ
ಮೇಣೇನು? ಮೂಲವಿಲ್ಲದೆ ಬಡ್ಡಿ ಹೇಗೆ?

(ಮುಳಿಯ ತಿಮ್ಮಪ್ಪಯ್ಯ)

# ವನಸುಮ

ವನಸುಮದೊಲೆನ್ನ ಜೀ
ವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ— ಹೇ–ದೇವ ॥ ಪಲ್ಲವಿ ॥

ಜನಕೆ ಸಂತಸವೀವ
ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ಬಿಡದೆ ॥ ಅ. ಪಲ್ಲವಿ ॥

ಕಾನನದಿ ಮಲ್ಲಿಗೆಯು
ಮೌನದಿಂ ಬಿರಿದು ನಿಜ
ಸೌರಭವ ಸೂಸಿ ನಲವಿಂ;
ಕಾನೆಲೆಯು ಪಿಂತಿರ್ದು
ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ --

ಉಪಕಾರಿ ನಾನು, ಎ
ನ್ನುಪಕೃತಿಯು ಜಗಕೆಂಬ
ವಿಪರೀತ ಮತಿಯನುಳಿದು;
ವಿಪುಲಾಶ್ರಯವನೀವ
ಸುಫಲಸುಮಭರಿತ ಪಾ
ದಪದಂತೆ ನೈಜಮಾದೊಳ್ಪಿನಿಂ ಬಾಳ್ವವೊಲು—

(ಡಿ. ವಿ ಗುಂಡಪ್ಪ—ನಿವೇದನ.)

## ದಾನ

ಪಡೆದುಂ ಪಣಮುಂ, ಪಾತ್ರಂ
ಬಡೆಯದೊಡದು ನಿಷ್ಫಲಂ. ಫಲಾರ್ಥಿಗೆ ಪಾತ್ರಂ
ಬಡೆವುದೆ ಪುಣ್ಯಂ— ಪಣಮುಂ
ಪಡೆವುದು ಪುಣ್ಯಮೆ? ಪಣಂ ಮಹಾಹಿಗಮಿಲ್ಲ!

ತಡೆಯದೆ ಮುಗಿಲ್ಗೆ ಕೊಡುವುದು
ಕಡಲಿತರಜನಕ್ಕೆ ಕೈಪೆಯಪ್ಪುದು. ಕುಡಲು
ಳ್ಕೊಡೆ ಪಾತ್ರಮರಿದು ಮಾಣದೆ
ಕುಡುವುದಪಾತ್ರಕ್ಕೆ ಕೊಟ್ಟೊಡೇಂ ಪುರುಳುಂಟೇ?

ಸ್ವಾತಿಯ ಮುಗಿಲ್ಗೆ ಕಾನಿ
ತ್ತಾ ತೋಯಂ ರತ್ನಮಾಗೆ ರತ್ನಾಕರಮಾ
ಯ್ತಾ ತೋಯದಿನೆಡೆಯರಿಯದೆ
ಪಾತಾಳಕ್ಕಿತ್ತ ತೋಯಮೇನಾಯ್ತರಿಯಾ!

ದೇವರ್ಗಲ್ಲದೆ ಕಳಿಯಂ
ಜೈವಾತೃಕನೀಯದಂತಿರುತ್ತಮಪಾತ್ರ
ಕ್ಕೀವುದು ಧನಮುಂ, ಸೌಖ್ಯಮ
ನೀವುದದುಂ ತವೆಯದಾ ಯುಗಾಂತಂ ಬರೆಗಂ.

ಕುಡುವಾತನರ್ಥಿಯಪ್ಪಂ,
ತೊಡರದೆ ಕೊಳಾತನುತ್ತಮ ಪ್ರಭುವಪ್ಪಂ.
ಕಡೆಗಣಿಸಿ ಧರ್ಮಪಾತ್ರ
ಪಡೆದುನ್ನತಿಯಂ ಸುರಾದ್ರಿಯುಂ ಪಡೆದಪುದೆ?

ಓವಿ ಫಲತರುಗೆ ನೀರ್ಗಳ
ನೀವುದುಮಂ, ಬೈತು ಬಿತ್ತನೊಲವಿಂ ಬೆಳೆಗೆ
ಯ್ವಾವುದುಮಂ, ಸತ್ಪಾತ್ರ
ಕ್ಕೀವುದುಮಂ, ದಾನಮೆಂಬ ನಾಚಿಕೆಯುಂಟೆ?

ಬಿಡು ಮುತ್ತಂ ಮಾಣಿಕಮಂ
ಪಿಡಿದೊಡ್ಡಿದ ಯತಿಯ ಕೈಯೊಳಿಕ್ಕಿದಪೆರೆ? ಓ
ರ್ಪಿಡಿಗೂಳನಿಕ್ಕಿ ಸಗ್ಗಂ
ಬಡೆಯದ ನರನೆಗ್ಗನಲ್ತೆ! ಭುವನಾಭರಣಾ!

(ಕವಿಕುಂಜರ— ನೇಮಿನಾಥಪುರಾಣ)

## ಹದಿಬದೆಯ ಧರ್ಮ

ಸಾಂಗವೇದವನೋದಿ, ಸಕಲ ಧರ್ಮಗಳ ತ
ತ್ತ್ವಂಗಳನರಿದಾಚರಿಸಿ,
ತುಂಗಮಹಿಮೆವೆತ್ತು ದೋಷವಳಿದ ಮುನಿ
ಪುಂಗವನೊರ್ವನೆಸೆದನು.
ಮನೆಯೊಳು ಮರುಕವನುಳಿದು, ತಪವ ಗೈವ
ಮನದಿ ವನವನನುಸರಿಸಿ,
ತನುವ ದಂಡಿಸಿ ಘೋರ ತಪವನೆಸಗುತಲ್ಲಿ
ಮುನಿಮುಖ್ಯನೆನಿಸಿ ಮೆರೆದನು.
ಆ ಋಷಿವರ್ಯನಂತಿರ್ಪ ವೇಳೆಯೊಳಾ
ಭೂರುಹದಗ್ರಶಾಖೆಯೊಳು
ಸೇರಿದ ಬಿಳುವಕ್ಕಿ ಬೀಳುವ ದನಿ ಮಿಗೆ
ಕೂರವಾಗಿರೆ ಕೊನರಿದುದು.
ಆ ಪರಿ ದನಿ ಯಾವ ಬಳಿಯೊಳು ಪೊಣ್ಮಿದು
ದಾ ಪರಿಸರವನಾರೈದು,
ಕೋಪವೆರಸಿ ನೋಡೆ ಕೂರ್ತು ತಾಪಸನಂ
ದಾ ಪಕ್ಕಿಗಳುವಡಗಿದುದು.
ಹರಣವಳಿದು ಧರೆಗುರುಳಿದ ಪಕ್ಕಿಯು
ಪರಿಯು ನಿಟ್ಟೆಸಿ ಪರಿತಪಿಸಿ,
ಇರದೆ ತಾನೆಸಗಿದ ತಪಗಳ ಮಹಿಮೆಗೆ
ಸರಿಯಿಲ್ಲವೆಂದೆಣಿಸಿದನು.
ಬಳಿಕ ಪಸಿದು ಪಾರ್ವರ ಬೀದಿಯೊಳಗೊಂದು
ನಿಳಯುವ ಪೊಕ್ಕು ನಿಂದಲ್ಲಿ
"ಬಳಲಿದೆನೆನಗುಣ ಬಡಿಸು" ಎಂದಲ್ಲಿದ್ದ
ಕುಲಪಾಲಿಕೆಗುಸುರಿದನು.
ಒಲಿದೇಕೆಪತ್ನಿಯೆಂಬೊಳ್ಪೆಸರೆಸೆವ
ಕುಲಸತಿಯುಳ್ಕರುಗೂಡಿ,
ನಲವಿನಿಂದವನಿಗನ್ನವನೀಯುವೆನೆಂದು
ಕೆಲದೊಳು ಕುಳ್ಳಿರಿಸಿದಳು.

ಅನಿತರೊಳಲ್ಲಿಗವಳ ಗಂಡನೈತರೆ,
ಮನವೊಲಿದಿದಿರೆದ್ದು ನಡೆದು,
ವಿನಯದಿಂದುಚಿತೋಪಚಾರವೆಸಗಿ ಮಿಗೆ
ಮನದನ್ನನನು ಮನ್ನಿಸಿದಳು.

ಪತಿಸೇವೆಯೊಳಗಿಂತು ಪಸಿದ ಪಾರ್ವನ ಮರಿ
ದತಿ ವಿಳಂಬವನಾಚರಿಸಲು,
ಸತಿಯರ ಧರ್ಮದ ಸಾರವನರಿಯದೆ
ಖತಿಗೊಂಡು ಮುನಿ ಗಳಪಿದನು.

"ಅತಿ ಘೋರ ತಪವೆಮ್ಮದದನು ನೀನರಿಯದೆ
ಮತಿಗೆಟ್ಟು ಮರುಳಾಗದಿರು;
ಪತಿಶುಶ್ರೂಷೆಯು ಬಲ್ಮೆ ಫಲಿಸದು ಕೇಳಿಲ್ಲಿ
ಯತಿಧರ್ಮದಿರವಿದು ಬೇರೆ"

ಎಂದು ಗರ್ವದಲಿ ಸೊಕ್ಕೇರಿ ನುಡಿದ ಮುನಿ
ಯಂದವನಾರ್ಕೈವುತೊಡನೆ,
ಅಂದು ತನ್ನಾಣ್ಮನೊಳನುಮತಿ ಪಡೆದೈ
ತಂದು ತಾಂ ನುಡಿದಳಿಂತೆಂದು—

"ಬಳಲಿದೆ ಸಾಕಿನ್ನು ಬಡಸಿದನ್ನವನುಂಡು
ತಳುವದೆ ತಪವನಾಚರಿಸು.
ಬಿಳುವಕ್ಕಿಯು ಬೀಳುಗೆಡಹಿದ ಬಿಂಕವೀ
ಬಳಿಯೊಳು ಬಣ್ಣವಡೆಯದು.

"ಮರುಳೆ! ನೀನೀ ಮಾತ ಮರೆ; ಧರ್ಮಸೂಕ್ಷ್ಮದೊಂ
ದಿರವ ನೀನರಿತವನಲ್ಲ.
ಪರಮಪತಿವ್ರತೆಯರ ಬಗೆ ಬೇರಿದು;
ಹರಿಹರಾದ್ಯರ ಹವಣಲ್ಲ.

"ಇತರ ಚಿಂತೆಯನುಳಿದೇಕಚಿತ್ತದೊಳಾತ್ಮ
ಪತಿಪಾದಭಕ್ತಿಯೊಳೆಸೆವ
ಸತಿಯರೊಲಿದು ಪರಸಿದುದೆಯನುಗ್ರಹ,
ಖತಿಗೊಂಡು ನುಡಿದುದೆ ಶಾಪ.

"ಆ ತ್ರಿಮೂರ್ತಿಗಳಾ ಮಂತ್ರಿತ ಜಲಸೇಕ
ಮಾತ್ರದೆ ಶೈಶವ ಮೈದೆಗೆದು,
ಅತ್ರಿಯ ವರಸತಿಗನುಸೂಯಾದೇವಿಗೆ
ಪುತ್ರರಾದರು ಪೂರ್ವದೊಳು

"ಪಾತಿವ್ರತ್ಯದೇಳ್ಗೆಯನು ಪರಿಕಿಪೆನೆಂ
ದೋತ ರಾಘವನುಸಿರ್ದೊಡನೆ,
ಸೀತೆ ಬೆಂಕಿಯ ಪುಗೆ ಶೀತಲವಾದುದು.
ಮಾತಾವುದು ಮತ್ತೆ ಬೇರೆ?

"ಧರ್ಮಗತಿಯ ತಾರತಮ್ಯವ ತಿಳಿವೊಡೆ
ಪೆರ್ಮೆಯ ಬಿಟ್ಟು, ಬೇಸರದೆ,
ನಿರ್ಮಲಮತಿಯಾಗಿ ನೀಂ ನಡೆ ಮಿಥಿಲೆಗೆ
ಧರ್ಮವ್ಯಾಧನ ಬಳಿಗೆ."

ಎಂದೇಕಪತ್ನಿನುಡಿಯ ಕೇಳಿ ಮುನಿ ಮನ
ದಂದವಳಡಿಗಳಿಗೆರಗಿ,
ಅಂದಿನ ಗರ್ವವಳಿದು ಮಿಥಿಲೆಯ ಬಳಿ
ಸಂದನು ಬಲುಸಂತಸದೊಳು.

(ಸಂಚಿಯ ಹೊನ್ನಮ್ಮ—ಹದಿಬದೆಯ ಧರ್ಮ

---

## ಮುದಿಯ ರಾಮಗೌಡ

ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ,
ಜನಗಳೆಲ್ಲಾ ಹಟ್ಟಿಯಲ್ಲಿ ಬಳಲಿ ಕೆಡೆದರು ತೆಪ್ಪಗೆ;
ಗಂಡ ಗೊರಕೆ ಹೊಯ್ಯುತಿಹನು ನಿದ್ದೆ ಕವಿದು ಮಗ್ಗುಲಲ್ಲಿ—
ನನಗೂ ಹೊಟ್ಟೆಯ ದುಃಖವೆಲ್ಲಾ ಕಣ್ಣಹನಿಯಲಿ ಸುರಿವುದು.

ಚಿಕ್ಕ ಹರೆಯದ ಚಾಮನೊಲಿದು ಮದುವೆಗೆನ್ನ ಬಯಸುತಿದ್ದ.
ಮಾತನೆತ್ತಲು ರೊಕ್ಕವಿಲ್ಲದೆ ನಾಚಿ ಸುಮ್ಮನೆ ಇರುವನು.
ದುಡ್ಡುಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ—
ದುಡ್ಡುಕಾಸನು ನನ್ನ ಸಲುವೇ ಕೂಡಿಹಾಕಲು ಹೋದನು.

ಅವನು ಹೋಗಿ ನೆಟ್ಟಗೆಲ್ಲಾ ಎರಡು ವಾರ ಕಳೆಯಲಿಲ್ಲ,
ಅಪ್ಪ ಕೈಯ ಮುರಿದುಕೊಂಡ; ಕಳ್ಳರೊಯ್ದರು ದನವನು.
ಅವ್ವ ನರಳುತ ಬಿದ್ದುಕೊಂಡಳು; ಜಾಮ ಎತ್ತಲೊ ಕಡಲಲಿದ್ದನು.
ಇತ್ತ ಮುದಿಯ ರಾಮಗೌಡ ನನ್ನ ಬಯಸಿ ಬಂದನು,
ಅಪ್ಪ ಹೊರಗೆ ಗೆಯ್ಯಲಾರ, ಅವ್ವ ಒಳಗೆ ನೆಯ್ಯಲಾರಳು;
ಹಗಲು ಇರುಳು ನಾನು ದುಡಿದೂ ನಮಗೆ ಹಿಟ್ಟು ಹುಟ್ಟದು.
ರಾಮಗೌಡ ಕಷ್ಟಕಾದ; ಕೈಯ ಹಿಡಿದು ಕಣ್ಣ ನೆನಸಿ,
ಅವರ ಸಲುವಾಗೆನ್ನ, ಚೆನ್ನಿ ಮದುವೆಯಾಗು, ಎಂದನು.
ನನ್ನ ಮನಸೂ ಒಲ್ಲೆನೆನುವುದು; ಜಾಮ ಬರುವ ನಚ್ಚುಹೋಗದು;
ಎಲ್ಲಿ ಬರುವನು? ಗಾಳಿ ಬಡಿದು ಹಡಗು ಪುಡಿಪುಡಿಯಾಯಿತು.
ಹಡಗು ಪುಡಿಪುಡಿಯಾಯಿತಯ್ಯೊ! ಸಾಯದೇತಕೆ ಜಾಮ ಉಳಿದ!
ಕೊರಗಿ ನಾನೀ ಬೇಗೆಯಲ್ಲಿ ಏಕೆ ಬದುಕುತ್ತಿರುವೆನು!
ಅಪ್ಪ ಹೇಳಿದ, ಗದರಿಕೊಂಡ; ಅವ್ವ ಬಾಯಲಿ ಆಡ ಒಲ್ಲಳು,
ಅವಳು ನೋಡಿದ ನೋಟವೇ ನನ್ನದೆಯನಿರಿಯಿತು, ಮುರಿಯಿತು.
ಅವನ ಕೈಯಲಿ ಕೈಯನಿಟ್ಟರು; ಮನಸು ಕಡಲಲಿ ನಿಂತುಹೋಯಿತು.
ಅಂತು ಮುದಿಯ ರಾಮಗೌಡ ನನಗೆ ಗಂಡನಾದನು.
ಮದುವೆಯಾಗಿ ನೆಟ್ಟಗೆಲ್ಲಾ ನಾಲ್ಕು ವಾರ ಕಳೆಯಲಿಲ್ಲ,
ಬಾಗಿಲಲ್ಲಿ ಕಲ್ಲ ಮೇಲೆ ಕುಳಿತು ಕೊರಗುತ–ಕಂಡೆನು!
ಗಾಳಿಯಾಗಿ ಬಂದ ಜಾಮ ಎಂದುಕೊಂಡೆನು–ಜಾಮ ನಕ್ಕು,
ತೆರವ ತಂದೆ, ಮದುವೆಯಾಗಲು ಬಂದೆ, ಚೆನ್ನಿ, ಎಂದನು.
ಬಿಕ್ಕಿ ಬಿಕ್ಕಿ ನುಡಿಸಿ ನುಡಿಸಿ, ದುಃಖವೆಲ್ಲಾ ಹೇಳಿಕೊಂಡೆವು,
ಒಂದು ಮುತ್ತ ಸೆಳೆದುಕೊಡೆವು–ಅಟ್ಟಬಿಟ್ಟೆ, ಆಗಲಿ!
ಸಾಯ ಒಲ್ಲೆನ ನಾನು ಪಾಪಿ! ಅಯ್ಯೊ! ಪಾಪಿಗೆ ಸಾವುಬಹುದೆ?
ಹುಟ್ಟದೆ ಇರಬಾರದೇ! ಈ ಬೇಗ ಬಾಳನು ತಾಳ್ವೆನೆ!
ಗಾಳಿಯಾಗಿ ಸುಳಿಯುತಿರುವೆ–ಮನೆಯ ಕೆಲಸ ಅಕ್ಕರಿಲ್ಲ,
ಜಾಮನನು ನೆನೆಯುವುದು ಪಾಪ; ಎಷ್ಟೊ ತಡೆಯುವೆ ಮನಸನು?
ಒಳ್ಳೆ ಗರತಿಯಾಗಿ ಬದುಕಲು ಎದೆಯನೆಷ್ಟೊ ಗಟ್ಟಿಮಾಡುವೆ,
ರಾಮಗೌಡನ ಪ್ರೀತಿ ನಂಬಿಕೆಗೆಂತು ಹೋಹವ ಬಗೆವೆನು!

## ಪ್ರಾರಬ್ಧದಳವ ಮೀರಲು ಸಾಧ್ಯವಿಲ್ಲ

ಧರಣಿಯೆನ್ನುವ ಪೂರ್ಣಯುವತಿಯ ತಿಲಕದ
ತೆರದಿಂದಲೊಂದು ಪಟ್ಟಣವು
ಮೆರೆಯುತಲಿರುವುದು ಬಹುವಿಧ ಭಾಗ್ಯದ
ಭರದಿಂದಲಂದವಾಗಿರುತ.

ಬಹು ಭಾಗ್ಯವಂತರಾರೋಗ್ಯವಂತರು ಮತ್ತೆ
ಬಹು ವಿದ್ಯೆಗಳ ಕಲಿತವರು,
ಬಹು ವಿಧ ಕೌಶಲ್ಯವಂತರಿರುವರಾ
ಮಹಿಯೊಳು ಬಹುಸುಖದಿಂದ.

ಆ ನಗರದ ನಾಗರಿಕರೊಳಗಿಹಳೊಬ್ಬ
ಮಾನಿನಿ ಮದನನ ಗಣಿಯು,
ಕ್ಷೋಣಿಯ ಪುರುಷವರ್ಗವ ಮೋಹಗೊಳಿಸುವ
ಜಾಣತನವ ಪಿಡೆದಿರುತ.

ಬಹು ರೂಪವತಿ ಬಹು ಗುಣವತಿ ಸುದತಿಯು
ಬಹು ವಿದ್ಯಾವತಿಯಾಗಿಹಳು,
ಬಹು ಬೆಡಗುಗಳ ಬಿನ್ನಾಣವ ತೋರುತ
ಬಹುಮಾನವನು ಪಡೆದಿಹಳು.

ಹುಡುಕೆದೊಡೊಂದಾದರೂ ದೋಷವಿಲ್ಲದ
ನಡೆನುಡಿಯಿಂದ ಶೋಭಿಪಳು,
ಅಡಿಗಡಿಗೀಶ್ವರನಡಿಗಳ ಮನದಲ್ಲಿ
ಬಿಡದೆ ಭಜಿಸುತಿರ್ಪಳಾಕೆ.

ಶಿವನ ತಲೆಯನೇರ್ದ ಚಂದ್ರನೊಳಗೆ ಕಳಂ
ಕವನಿಟ್ಟಭ್ಯಾಸದಿ ಬ್ರಹ್ಮ
ಬುವಿಯೊಳೀಕೆಗೆ ಚಂಡಾಲರ ಜಾತಿಯೊಳಗೆ ಜ
ನ್ಮವನಿತ್ತನೇನೆಂದು ಪೇಳ್ವೆ?

ಮುನ್ನ ಮಾಡ ಕೆಟ್ಟ ಕರ್ಮದ ಫಲದಿಂದ
ಚೆನ್ನೆ ಚಂಡಾಲೆಯಾದೊಡಮೇಂ?
ಸನ್ನುತ ಸತ್ಕರ್ಮಸಂಚಯ ಬಲದಿಂದ
ತನ್ನುನ್ನತಿಯ ಬಿಡದಿಹಳು.

ಹೊಲತಿಯಾಗಿಹ ತಾನು ತನಗೆ ತಕ್ಕಂತಿಹ
ಹೊಲೆಯನನೊಲ್ಲದೆ ಮನದಿ
ಬಲು ದೊಡ್ಡತನದೊಳಿರ್ಪವನನೆ ಮದುವೆಯಾ
ಗಲು ಯತ್ನಕಾರಂಭಿಸಿದಳು.

ಇಳೆಯೊಳೆಲ್ಲರು ಜೀ! ಜೀ! ಎಂದು ಸಂರಂಭದಿ
ಇಳೆಯಾಣ್ಮನನು ಸೇವಿಸುವುದ
ತಿಳಿಯುತಾತನ ಮೇಲೆ ಮನಸಿಟ್ಟಾತನ ಚರ್ಯೆ
ಗಳನು ಪರೀಕ್ಷೆ ಮಾಡಿದಳು.

ಮುನಿಯೊಬ್ಬ ಬರುತಿರೆ ದಾರಿಯೊಳಾತಗೆ
ಜನನಾಥನೆರಗಲು ನೋಡಿ,
ಜನನಾಥನಿಂದಲಿ ಮನವನು ತೆಗೆದಳು
ಮುನಿಯೆ ದೊಡ್ಡವನೆಂದು ತಿಳಿದು.

ಅರಸನಿಂದೆರಗಿಸಿಕೊಂಡಿಹ ಮುನಿಯೆ ಈ
ಧರೆಯೊಳು ದೊಡ್ಡವನೆಂದು
ತರುಣಿಯಾ ಮುನಿಯ ಹಿಂಬಾಲಿಸಿದಳು ಬಹು
ಪರಿಯೊಳಾತನ ಪರೀಕ್ಷಿಸುತ.

ಆ ಮುನಿಯುಲ್ಲೊಂದು ಶಿವಲಿಂಗವನು ಕಂಡು
ನೇಮನಿಷ್ಠೆಯೊಳೆರಗಿದೊಡೆ.
ಆ ಮುನಿಯಿಂ ಶಿವಲಿಂಗವೇ ಮೇಲೆಂದು
ಕಾಮಿನಿ ನೆನೆದಳು ಮನದಿ.

ಮುನಿಯಿಂದ ವಂದನೆಗೊಂಡಿಹ ಲಿಂಗವೆ
ಘನತರವೆಂದು ಭಾವಿಸುತ,
ಅನುನಯದಿಂದದರನುವನರಿಯಲೆಂದು
ಮನದೊಳು ಸಂಕಲ್ಪಿಸಿದಳು.

ಆಗಲೆ ನಾಯೊಂದು ಬಂದಾ ಲಿಂಗದ ಮೇಲೆ
ಬೇಗ ಕುಳ್ಳಿರೆ ದಿಟ್ಟತನದಿ
ನಾಗವೇಣಿಯು ಲಿಂಗಕಿಂತಲೀ ನಾಯೆ ಮೇ
ಲಾಗಿಹುದೆಂದಳು ನೋಡಿ.

ನಾಯನ ಮೇಲೆ ಕೂಡಿಸಿಕೊಂಡ ಲಿಂಗವು
ನಾಯಿಂದ ಕೀಳೆಂದು ತಿಳಿದು,
ನಾಯೆ ಸರ್ವೋತ್ಕೃಷ್ಟವೆಂದು ನೋಡಿದಳಾಕೆ
ನಾಯ ವಿಲಾಸವನಾಗ.

ನಲವಿಂದ ನಾಯ್ಬಂದು ಕೆಲದೊಳೊಬ್ಬಾನೊಬ್ಬ
ಹೊಲೆಯನ ಕಾಲ್ಗಳ ಮೇಲೆ
ನಲಿದಾಡೆ, ನಾಯ್ಗಿಂತ ಹೊಲೆಯನೆ ಮೇಲೆಂದು
ಲಲನೆ ನಿಶ್ಚಯಿಸಿದಳಾಗ.

ಹೊಲೆಯ ಜಾತಿಯನಿತ್ತ ದುಷ್ಕರ್ಮವೇಗದಿ
ಹೊಲತಿಯ ಬುದ್ಧಿಗೆ ತೋರೆ,
ಹೊಲೆಯನೆ ಪತಿಯಾದನಿದ ನೋಡೆ, ಪ್ರಾರಬ್ಧ
ದಳವ ಮೀರಲು ಸಾಧ್ಯವಿಲ್ಲ.

(ಹೊಸಕೆರೆ ಚಿದಂಬರಯ್ಯ)

## ಪಾರಿಜಾತದ ಕಥೆ

ಮಳೆ ನಿಂದು ಚಳಿ ಬಂದು ಮೋಡವಳಿದಿರುವಂದು
ಚಳಿಗಾಳಿ ವನಗಳಲಿ ಸುಳಿದಾಡುತಿರುವಂದು
ಉಳಿದ ಹೂ ಚಳಿಯಿಂದೆ ಬೆರೆತು ಬಾರದೆಯಿರಲು
ತಳಿರ ದಿನಕೆಂದು ವನವಿದರು ನೋಡುತರಲಿರಲು

ಬಳಿಯ ಉದ್ಯಾನವನದಂತರದೊಳೊಂದು
ಎಳೆಮಲರು ಪಾರಿಜಾತವು ತಾನು ಬಂದು
ಎಲೆಯ ಮರೆಯೊಳು ನಿಂದಿದೆ.

ಅಭ್ರವಿನಿಸಿಲ್ಲದಾ ಅಗಸದ ಮಧ್ಯದಲ್ಲಿ
ಶುಭ್ರದ್ಯುತಿಯ ಭರದಿ ಲೋಕಗಳನೆಲ್ಲವನು
ವಿಭ್ರಮಣಗೊಳಿಸುತಿಹ ಕಳೆಯ ಸೊಬಗಿಂ
ವಿಭ್ರಾಜಿಸುತ ಚಂದ್ರನೈತಂದು ತನ್ನೊಂದು

ಚೆಂದವನು ಬಹಳ ಸರಳತೆಯಿಂದ ತೋರಿ
ಮಂದಹಾಸದ ಸೊಗವ ವನದೆಡೆಗೆ ಬೀರಿ
ಬಂದಿಯಾಯ್ತಿದಕೆ ಮಲರು.

ಮೆದುವಾದ ಬೆಳ್ಪಿಂದೆ ಮಡಿಲು ಶೋಭಿಸುತಲಿರೆ
ಪುದುವಾದ ರಾಗಸಂಪದವು ಹೃದಯದೊಳಿಸೆಯೆ
ಮೃದುಹಾಸದಿಂದೆ ಹೂ ಅನುರಾಗವನು ತೋರಿ
ಮುದದಿಂದೆ ಚೇತನದೊಳರಳಿ ಪೆರ್ಮೆಯ ಸಾರಿ

ಎನ್ನ ಮನದನ್ನ ನೀನೇ ಚೆನ್ನ ಎನ್ನ
ನಿನ್ನವಳು ಎಂದು ಭಾವಿಸಿ ಈಗ ತನ್ನ
ಮನ್ನಿಸೆಂಬಂತಿರ್ದುದು.

ನೆಲದ ಹೂವಾಗಸದ ಹೂ[illegible]ದಕೆ ಸೋತು
ಕೆಳೆಯನಾಶಿಸಿ ನಿಂದ ಪರಿಯ ನೋಡುತೆ ವನದ
ಉಳಿದ ಚೇತನವೆಲ್ಲ ಇದಕೆ ಕೊನೆಯೇನೆಂದು
ಎಳೆ ಮಲರಿಗರಿವಿಲ್ಲವೆಂದು ಕನಿಕರದಿಂದ

ಮರುಳುತನ ನಿನಗೇನು ಬಂದಿಹುದು ನೀನು
ಸರಿಯುಪ್ಪುದುಂಟೆ ಚಂದ್ರನಿಗೆ ನಿನಗೇನು
ಮರುಳುತನ ಬಂತೆಂದುವು.

ವನಚೇತನಗಳಿದನು ನೋಡಿ ನೀರವವಾಗಿ
ಮನದೆ ಮರುಗಿರೆ ಹೂವ ಗೆಲ್ದವನು ಬಾಂದಳದೆ
ಇನಿಸು ಕಳವಳವ ತೋರದೆ ಶಾಂತಭಾವದಲಿ
ಘನಿಸಿರುವ ಹಾಸವನು ತೋರುತಿಳಿಯುತಲಿಹನು

ಚಳಿಗಾಳಿಯೊಂದು ಮೃದುಮೃದುವಾಗಿ ಬೀಸಿ
ಮಲರ ಬಳಿಗೈತಂದು ಮಗು ನಿನ್ನ ಆಸೆ
ಒಳಿತಲ್ಲ ಬಿಡುಯೆಂದುದು.

ಕೊಟ್ಟ ಮನವನು ಮರಳಿ ಕೊಳ್ಳಲಾರದೆ ಮಲರು
ಇಟ್ಟೆ ನಾನೆನ್ನ ಮನದನ್ನನಡಿಗಳೊಳಸುವ
ದಿಟ್ಟಿಸಿದನಿವನೆನ್ನನಿದೆ ಎನಗೆ ಪೂರ್ಣಸುಖ
ಮುಟ್ಟಿದನು ತನ್ನ ಕರದಿಂದೆನ್ನ ಬಿಡನಲ್ತೆ

ಎನ್ನ ಕೊಳ್ಳುವನಿವನು ದಿಟವೆಂದು ಹೂವು
ತನ್ನ ಪ್ರಿಯನೆಡೆಗೆ ಹಾರುವ ಎಂದು ಕಾವ
ಇನ್ನುಳಿದು ಬಿತ್ತು ನೆಲಕೆ.

ಸಡಯನಾಗಿಹ ಚಂದ್ರನನು ಸೇರೆ ನೋಡಿ ಹೂ
ಉದುರಿ ನೆಲದಲಿ ದೂಳ ಸೇರಿರುವುದನು ನೋಡಿ
ಅದುರಿ ವನವೆಲ್ಲ ಅನುತಾಪದಿಂ ಮರುಗಿದುದು
ಬದಿಯ ಚಳಿಗಾಳಿ ಕನಿಕರದಿಂದೆಸೆಯುತಿಹುದು.

ಯಾಮಿನಿಯು ಹಂತ ಪ್ರೇರಿಸಿದೆನೇ ನಾನು
ಕೋಮಲೆಯನಿದಕೆಂದು ಖೇದದಲಿ ತಾನು
ವ್ಯೋಮದಲಿ ನೆರೆ ಮರುಗಿತು.

ಎಳೆಮಲರು ಚಂದ್ರನಿಗೆ ಸೋತು ಕೆಟ್ಟು ಹದನ
ಬಳಿಕ ಬಂದದರ ಸೋದರಿಯರರಿಯುತೆ ಮರುಗಿ

ನೆಲದೆ ಬಿದ್ದಿರಲೆಮ್ಮ ಸೋದರಿಯು ನಾವಿಲ್ಲಿ
ಸಲೆ ಮೆರೆಯುವುದು ಚೆಂದವಲ್ಲೆಂದು ಉರುಳಿದುವು.

ಅದು ಮೊದಲು ಈ ಹೂಗಳೆಲ್ಲ ಈ ವರೆಗು
ಉದಯವಾಗುವ ಮುನ್ನ ಅದ ನೆನೆದು ಮರುಗಿ
ಉದುರಿ ನೆಲವನು ಸೇರ್ವುವು.

ಮಳೆ ನಿಂದು ಚಳಿ ಬಂದು ಮೋಡವಳಿದಿರುವಂದು
ಕಳೆದುಂಬಿ ಚಂದ್ರನಾಗಸದಿ ನಿಂದಿರುವಂದು
ಎಳೆಯ ಆ ಪಾರಿಜಾತದ ಗತಿಯ ಯಾಮಿನಿಯು
ಸಲೆ ನೆನೆಯುತೊಮ್ಮೊಮ್ಮೆ ಮರುಗಿ ಮಸಕಾಗುವಳು

ವನವು ನೆನೆದೊಮ್ಮೊಮ್ಮೆ ಅಂತೆ ನಡುಗುವುದು
ಘನಿಸಿದಂತಿಹ ಗಾಳಿಯಂತೆ ಸುಯ್ಯುವುದು
ಮನವ ಮರೆದಂತಲೆವುದು.

(ಮಾಸ್ತಿ ವೆಂಕಟೇಶ ಅಯ್ಯಂಗಾರ—ಅರುಣ)

---

## ಭರತೇಶ್ವರನ ಒಳವೋಲಗ

ಕಡೆಯಿಲ್ಲದಮೃತಸಂಪದವ ನಿನ್ನೊಳಗಿಟ್ಟು
ಬಡವನಂತಿಳೆಗೆ ಕಾಣಿಸುವ
ಬೆಡಗಿನ ಸಿದ್ಧ ಸನ್ಮತಿದೋರು ಭವ್ಯಾತ್ಮ
ರೊಡೆಯ ನಿರಂಜನಸಿದ್ಧ.

ಮತ್ತೊಂದು ದಿನದುದಯದೊಳೆದ್ದು, ಜಿನಸಿದ್ಧ
ರುತ್ತಮಾರಾಧನೆಗೈದು
ಚಿತ್ತಜರೂಪನುಪ್ಪರಿಗೆಯೊಳೋಲಗ
ವಿತ್ತನದೇನ ಬಣ್ಣಿಪೆನು?

ಕುಂದಣದುಪ್ಪರಿಗೆಯ ಮೇಲೆ ನವರತ್ನ
ದಿಂದಾದ ಮಂಟಪದಲ್ಲಿ
ಹೊಂದಾವರೆಯಂತೆ ಹೊಳೆವ ಗದ್ದುಗೆಯಲ್ಲಿ
ಬಂದು ಕುಳಿತನು ರಾಜೇಂದ್ರ.

ತನುಕಾಂತಿ ಭೂಷಣಕಾಂತಿಯಾ ಮಂಟಪ
ದನುಪಮಕಾಂತಿ ಮೆಳ್ಳೈಸೆ,
ಜನಪತಿ ತಾನೊಬ್ಬ ದಿನಪತಿಯಂತಿರ್ದ
ದಿನಪತಿಯುದಯಕಾಲದೊಳು.

ರಾಣಿಯರೆಲ್ಲ ಸಿಂಗರಿಸಿ ಲೀಲೆಯೊಳು ಕೈ
ಗಾಣಿಕೆಗಳನು ಕೈವಿಡಿದು,
ಪ್ರಾಣನಾಥನ ಕಾಣಲುಪ್ಪುರಿಗೆಯನು ಬಿ
ನ್ನಾಣದಿಂದಡರಿದರಾಗ.

"ನೋಡಿ ಬಾ ತಂಗಿ" "ಎಚ್ಚರಿಕೆಯಕ್ಕಾಜಿ" "ಕೈ
ನೀಡಕ್ಕಕೋ ಹಿಡಿ ತಾಯಿ!"
"ಓಡದಿರಕ್ಕ!" "ಬಾ ಬಾ ತಂಗಿ" ಎಂದು ಮಾ
ತಾಡುತೇರಿದರೊಲವಿನೊಳು.

ಹರಿವುತಿದ್ದವಳಿಗೆ "ಹರಿ ಹರಿ ಮುಂದೆ ನಿ
ನ್ನರಸನೀವನು ದೊಡ್ಡ ಮೆಚ್ಚು"
"ಬರಲಾರದವರೇನನಾದರೆ"ನುತ ತಾವು
ಸರಸವಾಡುತ ಹತ್ತುತಿಹರು.

"ತವಕಿಸಿ ನಡೆ ನಡೆಯೆನುತಿಪ್ಪಳಿವಳೆಷ್ಟು
ದಿವಸದಿಂ ಕಾಣಳೊ ಪಳಿಯಾ!"
"ನಿವಗೆ ಹಿತವ ಪೇಳ್ವುದೆನ್ನದು ತಪ್ಪು ಮಾ
ನವ ಮಾಳ್ಪೆ"ನೆನುತೇರುತಿಹಳು.

"ಮೌನವೀಕೆಗೆ ತನ್ನ ಗಂಡರಿತಾತ್ಮನ
ಜಾನಿಸುತ್ತೈದುವ ಪರಿಯೊ,
ಏನೆಂದು ತಿಳಿಯಬಾರದಾ ಹೇಳು ನಿನಗೆ ಸು
ಧ್ಯಾನವ ಕಲಿಸಿದನಾರೆ?"

"ಧ್ಯಾನಗೀನವ ನೀವು ನಿಮ್ಮರಸನು ಬಲ್ಲಿ
ರಾನೇನ ಬಲ್ಲೆನಾ ಸುಗುಣೆ?

ಈ ನಿಮ್ಮ ಸರಸಸಲ್ಲಾಪಕೆ ಮನದಲ್ಲಿ
ಆನಂದಿಸುತೆ ಬಂದೆನಕ್ಕಾ!"

"ಹಿಂದುಳಿದರೆ, ಮುಂದೆ ನಡೆದರೆ, ಸಮ್ಮನೆ
ಬಂದರೆ, ಮಾತನಾಡಿದರೆ,
ಒಂದೊಂದ ಕಲ್ಪಿಸುವಿರಿ ನಿಮ್ಮನುರೆ ಗೆಲು
ವಂದವನಾ ಚಕ್ರಿ ಬಲ್ಲಾ.

"ಬಿನದ ಸಾಕಿನ್ನು, ಸಮ್ಮನೆ ಬನ್ನಿ, ಮಂಟಪ
ಸನಿಹವಾಮುದು ಹೆಣ್ಣುಗಳಿರಾ;
ತನುವನೋಸರಿಸಿಕೊಂಡೋಜೆಯೊಳೈತನ್ನಿ"
ರೆನುತೇರುತಿಹರಲ್ಲಿ ಕೆಲರು.

ನಡೆವಾಗ ಸವತಿಯು ಕಾಲ ಮೇಲೊಂದು ಕ
ಪ್ಪಿಡಿದರೆ ಕಂಡೊರ್ವಳದನು
ತೊಡೆದಳು ಕೈಮುಟ್ಟಿ "ತಂಗಿ ಹಾ! ಹಾ!" ಎಂದು
ಒಡನಾಕೆ ಝಿಂಕಿಸಿ ಹೋಗೆ.

"ಕಾಲ ಮೇಲದೆ ಕಪ್ಪು ತೊಡೆದುಕೊಳ್ಳೆಂದೊಲ್ಪು
ಹೇಳದೆ ತೊಡೆವರೆ ತಂಗಿ?"
ಓಲಗ ಮುಟ್ಟಲಾದುದು ಸುಮ್ಮನೈದಕ್ಕ
ಕೇಳಬಹುದು ನಮ್ಮ ಮಾತು!"

ಇಂತು ವಿನೋದ ವಿನಯದಿಂದ ಭೂಪನ
ಕಾಂತೆಯರೆಲ್ಲರೋಜೆಯೊಳು
ಅಂತರಿಸದೆ ನಡೆದರು ಮುಟ್ಟಿ ಮುಟ್ಟಲೆಂ
ಬಂತಾಗಲೋಲಗಸಾಲೆ.

ಅರಸಿಯರಾನಂದದಿಂದ ಮಾಡವನೇರಿ
ಬರುತಿಪ್ಪರೆಂಬ ವಾರ್ತೆಯನು
ಚರಣದಂದುಗೆ ಕಟಿಸೂತ್ರದ ದನಿ ಮುಂದೆ
ಹರಿದು ಹೇಳಿದುವರಸನಿಗೆ.

ಅಳುಕುತೋಸರಿಸಿಕೊಳ್ಳುತ ಮೆಲ್ಲನರಸನ
ಬಳಿಗೆ ನಡೆದು ಮುಂದೆ ನಿಂದು,
ನಳಿತೋಳ ನೀಡಿ ಕಾಣಿಕೆಗೊಟ್ಟು ಕೈ ಮುಗಿ
ದೊಳಸಾರಿ ನಿಂದರೋಜೆಯೊಳು.

ಹೊಂಬಣ್ಣ ಮೈಯುಳೊರ್ವಳು ಕಾಣಿಕೆಗೆ ಹೊಸ
ನಿಂಬೆಯು ಹಣ್ಣ ತಂದಿತ್ತು,
ಕೆಂಬಲ್ಲು ಮಿನುಗೆ ಕೈಮುಗಿದು ನಿಂದಳು ಹೊನ್ನ
ಬೊಂಬೆಯುಂತರಸನೊತ್ತಿನೊಳು.

ನೀಲಾಂಗಿಯೊರ್ವಳು ಬಂದು ಕಾಣಿಕೆಗೊಂದು
ನೀಲಾಂಬುಜವನು ತಂದಿತ್ತು,
ಮೇಲೆ ಕೈಮುಗಿದು ನಿಂದಳು ಕೆಲದೊಳಗಿಂದ್ರ
ನೀಲದ ಪುತ್ತುಳಿಯುಂತೆ.

ರಾಣಿಯೊರ್ವಳು ಬಂದು ಹೊಂದಾವರೆಯುನು ಕೈ
ಗಾಣಿಕೆಯಿತ್ತು ಕೈಮುಗಿದು,
ಕ್ಷೋಣೀಶನೆಡದ ಭಾಗವ ಸಾರಿ ನಿಂದಳು
ಮಾಣಿಕಬೊಂಬೆಯೆಂಬಂತೆ.

ಕೆಂಪಿಯೊರ್ವಳು ಬಂದು ರಾಯನ ಹಸ್ತಕೆ
ಸಂಪಗೆಹೂಗಳ ನೀಡಿ,
ಪೆಂಪಿಂದ ಕೈಮುಗಿದ ಬಲೆಯುರೆಲ್ಲರ
ಗುಂಪಿನೊಳಗೆ ನಿಂದಳೊಡನೆ.

ಕರಿಯುಳೊಬ್ಬಳು ಬಂದು ಚಕ್ರವರ್ತಿಗೆ ತನ್ನ
ಕರಕುಶಲದೊಳು ರಚಿಸಿದ
ಸುರಗಿಯು ಮಾಲೆಯುನಿತ್ತಳು ರತಿದೇವಿ
ಸುರಗಿಯು ಮದನಗೀವಂತೆ.

ಮೈಯೊಡ್ಡಿ ಸಂಮುಖದೊಳು ನಿಲ್ಲದೆಲ್ಲರ
ಮೈಯು ಮರೆಗೆ ಸಾರುವವಳ

ಕೈಯ ಹಿಡಿದು ಕರೆತಂದೊರ್ವಳರಸಗೆ
ಕೈಯ ಕಾಣ್ಕೆಯ ಕೊಡಿಸಿದಳು.

ಭಾವೆ ಭಾವಗೆ ಕಾಣ್ಕೆಯಿಕ್ಕೆಂದು ಕಿವಿಯಲ್ಲಿ
ಭಾವಕಿಯರು ಹೇಳೆ ನಗುತ
ಮಾವಿನ ತಳಿರ ತಂದಿತ್ತಲೊರ್ವಳು ತನ್ನ
ಮಾವನ ಮಗನ ಹಸ್ತದೊಳು.

ಕಾವರಾಯಗೆ ಕಾಣ್ಕೆಯಿಕ್ಕಿ ನಿಂದುರೆ ವನ
ದೇವಿಯರೊಲ್ವೈಸುವಂತೆ
ಆ ವನಿತೆಯರು ನಿಂದಿದ್ದರು ಲಲನಾ
ಜೀವಮೋಹನನ ಪಕ್ಕದೊಳು.

ಎಲ್ಲರನೀಕ್ಷಿಸಿ ಕಿರಿದು ಹೊತ್ತಿನ ಮೇಲೆ
ಮೆಲ್ಲನೆ ಕೈಸನ್ನೆಯಿಂದ
ಕುಳ್ಳಿರವೇಳ್ದನು ಭೂಪಾಲನ ಹೆಂಗ
ಳೆಲ್ಲರು ಕುಳಿತರೊಪ್ಪದೊಳು.

ಸ್ಮರನ ಮುಂದತ್ತಿತ್ತಲುರೆ ಹಾರಿ ನಲಿದಾಡು
ವರಸಂಜೆಗಳ ಸಾಲಿನಂತೆ
ತರುಣಿಯರಿಕ್ಕುವ ಚಾಮರಗಳದೊಂದು
ಸಿರಿಯೊಪ್ಪಿತಾ ಸಮಯದೊಳು.

ರಾಯ ನೋಡಿದನು ಗಾಯಕಿಯರ ಮೊಗವನಾ
ಗಾಯಕಿಯರು ನೋಟವರಿದು
ಠಾಯೆ ಬಜಾವಣೆ ಗಮಕವೆಸೆಯೆ ಪಾಡ
ಲಾಯತವಾದರು ಕೂಡೆ.

ಅರಿದೆರೆದಬ್ಜದೊಳಿತುತಿದ್ದ ಮರಿದುಂಬಿ
ಸ್ವರಮಾಡಿ ಹೊರಮಡುವಂತೆ
ಗರಗಳಿಕೆಯೊಳು ಕೆಂಬಾಯ್ದೆರೆದಾಳಾಪ
ವಿರಚನೆ ಮಾಡಿದರೊಸೆದು.

ನೋಟ ರಾಯನ ಮೇಲೆ, ನೆನಹು ರಾಗದ ಮೇಲೆ,
ನೀಟತಂತಿಯ ಮೇಲೆ ಬೆರಳು.

ಚಾಟುಗಾತಿಯರು ಛಾಂದಸಿಕೆಯ ನೂಂಕಿ ಸ
ಘಾಟಿಕೆಯಿಂದ ಹಾಡಿದರು.

ರಾಗಿಸಿದರು ಮೊದಲುದಯರಾಗವನನು
ರಾಗಿಸುವಂತೆ ಚಕ್ರೇಶ;
ಆಗ ಮೇಲಮರೇಂದ್ರ ಸುಳಿದನಾದರೆ ಮುಂದೆ
ಹೋಗದಲ್ಲಿಯೆ ನಿಲ್ಲುವಂತೆ.

ನಲಿದು ಸಂಗೀತಸಮುದ್ರವ ಹೊಕ್ಕು ಮು
ಕ್ಕುಳಿಸಿ ಮುತ್ತುಗುಳುವಂದದೊಳು,
ಗಳ ತುಂಬ ಗಾನದ ತೆಗೆದುಃಬಾಯ್ದೆರೆಯೊಳು
ಸುಳುಹುಗಾಣಿಸಿದರೋಜೆಯೊಳು.

ನಾಭಿಯಿಂದೇಳಿಸಿ, ಎದೆಯೊಳೋಲಾಡಿಸಿ
ಶೋಭೆಯ ಮಾಡಿ ಕಂಠದೊಳು,
ಆ ಭೂಪ ಮೆಚ್ಚೆರಾಗಿಸಿದರು ಶ್ರೀದೇವಿ
ಶೋಭನವನು ಹಾಡುವಂತೆ.

ತುಂಬಿದ ಸಂಗೀತರಸದ ಬಲ್ಗೆರೆಯೊಂದು
ತೂಂಬನುಚ್ಚಿದರೋ ಎಂಬಂತೆ,
ತಂಬುರುವೀಣೆಯೊಳೊಲ್ದು ಪಾಡಿದರಂದು
ತುಂಬಜವ್ವನೆಯರು ಜಿನನಾ.

ಕೊಟ್ಟನವರ ಕರೆದುಡುಗೊರೆಗಳನೆದೆ
ದಟ್ಟಿ ಹಾಡಿದಿರಿ ಲೇಸೆಂದಾ.
ಪಟ್ಟವರ್ಧನನ ಕಾಲ್ಗೆರಗಿ ಬೀಳ್ಕೊಂಡವ
ರೊಟ್ಟೋಜೆಯಾಗಿ ಕುಳಿತರು.

ಸರಸಿಜಗಳು ಬಳಸಿರೆ ನಟ್ಟನಡುವೆ ತೋ
ರ್ಪರಸಂಚೆಯಂತೆ ರಾಜೇಂದ್ರ
ಅರಸಿಯರೋಲಗದೊಳಗಿದ್ದು ಹಗಲನು
ಸರಸಸಲ್ಲಾಪದಿ ಕಳೆದಾ.

(ರತ್ನಾಕರ ಸಿದ್ಧ— ಭರತೇಶ ವೈಭವ)

## ಭೀಮನು ಧೃತರಾಷ್ಟ್ರನನ್ನು ಸಾರಿದೂರಿದುದು

ಧೃತರಾಷ್ಟ್ರ ನೀ ಪಡೆದೆ ಹತಭಾಗಿ ಸುತರನ್ನು
ಅತಿ ದುಷ್ಟ ಪೃಥಿವಿಭಾರಕರಿವರನು.
ಸುತರು ನಿನ್ನನುಜ ಪಾಂಡುವಿಗೆ ನಾವಲ್ಲವೆ?
ಹಿತವನೆಸಗೆಯ? ನೀನು ದೊಡ್ಡಪ್ಪನು.

ಹುಡುಗಾಟವೆಂದು ಕರಕೊಂಡಡವಿಗೈದುತ್ತ,
ಹಿಡಿದು ಹೊಂಡದಿ ಹಾಕಿ ಕಲ್ಲನಿಟ್ಟು,
ಜಡಿದು ನಿನ್ನಯ ಮಕ್ಕಳೆನ್ನ ಕೊಲೆ ನೋಡಿದರು;
ಕಡೆಗೆ ಕಾಲಿಗೆ ಹೇಳಿದರು ಬುದ್ಧಿಯ.

ಆರು ಅರಿಯದಂತೆ ಕೈಕಾಲುಗಳ ಕಟ್ಟಿ
ನೀರೊಳಗೆ ಮುಳುಗಿಸುತ ಮೂಗನೊತ್ತಿ,
ಭಾರದಿಹ ಬನ್ನಗಳನೆಲ್ಲ ಬಿರಿಸುತ ಸುಣ್ಣ
ನೀರು ಸಹ ಕ್ಷೀರವೆನುತಲಿ ಕೊಟ್ಟರು.

ವಿಷದ ಲಡ್ಡುಗೆಯ ತಂದೆನಗಿದನು ತಿನ್ನೆಂದು
ಬಿಸಿಬಿಸಿಯೆ ಕೊಟ್ಟಿರುವರಾ ಖೂಳರು.
ನಿಶಿಯೊಳೊರಗಿರಲು ಹಾವುಗಳ ಕಚ್ಚಿಸಿ, ಕಣ್ಗೆ
ವಸನವನು ಕಟ್ಟಿ ಕಾಡೊಳು ಬಿಟ್ಟರು.

ಮಾಡುವರು ಮನಕೆ ಬಂತೆಂತಂತೆ; ಕೈ ಸೋತು
ಓಡುವರು ಅಜ್ಜನೆಡೆಗೊಂದಕೆರಡು
ಕೂಡುತಂತಿಂತೆಸಗಿದನು ಭೀಮನೆನುತೆನ್ನ
ಚಾಡಿ ಹೇಳಿದರಾ ಪಿತಾಮಹನಲಿ.

ಭೂಸುರಾಗ್ರಣಿ ದ್ರೋಣನಲಿ ಕಲಿವುತಿರಲಂದು
ಆಸನದಿ ಮುಳ್ಳಿಟ್ಟು ಅರಿಯದಂತೆ,
ದೋಷವೆನ್ನಲಿ ಹೊರಿಸುತತಿ ನಮ್ರರೆಂದೆನಿಸಿ
ಮೋಸವೆಸಗಿದರದನು ಮರೆವೆನೆಂತು?

ಮುಂಬದಿಯ ನೋಡುತ್ತಲೋದುತಾನಿರಲಂದು
ಹಿಂಬದಿಯೆ ಬಂದು ಕೂದಲನು ಬಗಿದು
ಕಂಬದಲಿ ಬಿಗಿದೆಲ್ಲರಂತೆ ಕುಳಿತಿರೆ ಕಣ್ಣ
ಗೊಂಬೆಗಳ ತಿರುಗಸುತ ತೋರಿಸಿದರು-

ತಂದೆಯಿಲ್ಲದ ಮಕ್ಕಳೆಮ್ಮನೆಂತಾದರೂ
ಕೊಂದು ರಾಜ್ಯವನೆಲ್ಲವನ್ನು ನುಂಗೆ,
ಅಂಧನೃಪ ನೀ ಮರುಳಿಸಗಿ ನಮ್ಮ ಬರಿಸಿದ್ಯೆ,
ಅಂದು ತೋರಿದೆ ವಾರಣಾವತವನು

ದ್ರಾಕ್ಷೆಯಂದದಿ ಸವಿನುಡಿಯನು ನುಡಿದೆಮ್ಮನಾ
ಲಾಕ್ಷಾಗೃಹಕ್ಕೆ ಕಳುಹಿಸಿದೆ ಬಳಿಕ;
ದಾಕ್ಷಿಣ್ಯಗೊಳದೆ ನಡುವಿರುಳು ಕಿಚ್ಚೊಟ್ಟಿಸಿದೆ
ಸಂಕ್ಷೇಮವಾಯ್ತಿಲ್ಲಿಗೆಂದು ಬಗೆದೆ

ಪ್ರಾರಬ್ಧವಶದಿಂದಲೂರೂರ ತಿರುತಿರುಗಿ
ನಾರಿ ಪಾಂಚಾಲೆಯನು ವರಿಸಿ ತಿರುಗೆ,
ತೋರಿದಿರಿ ಮತ್ತೆ ಇಂದ್ರಪ್ರಸ್ಥವನು ನಮಗೆ
ಬಾರೆಂದು ಜೂಜಾಡಿಸಿದಿರಿ ತಿರುಗಿ.

ಅರಿದೆವೇ ಕಪಟವೆಂದಾ ನೆತ್ತದಲ್ಲಿ ನಮ್ಮ
ಸರುವಸ್ವವನು ಸೋಲಿ ನಾರಿಯನ್ನು
ವರರೈವರೆಮ್ಮ ಕಣ್ಣೆದಿರನಲಿ ಹಿಡಿತಂದು
ಸೆರೆಗೆಳೆದು ಜೀವಜೀವವ ಕೊಂದಿರಿ.

ಹನ್ನೆರಡು ವರುಷ ವನವಾಸವನು ಕಳೆಯೆ ಮ
ತ್ತಿನ್ನೊಂದು ವರುಷವಜ್ಞಾತವಾಸಾ
ತಿನ್ನಿರ್ಕೈ ಮಾಡಿರುವ ಕರ್ಮಗಳನೆಂದೊರೆದು
ಬೆನ್ನುಹಿಡಿದಿರಿ ಬೆರಳೊಳೇಡಿಸಿದಿರಿ.

ನಾಚಿಸಲು ಘೋಷಯಾತ್ರೆಗೆನುತ್ತ ಬಂದಲ್ಲಿ
ಖೇಚರನೊಡನೆ ಸಿಲುಕಿ ಬಂದೆವ್ಮನು
ಯಾಚಿಸಲು, ನಮ್ಮ ಫಲಗುಣನು ನಡೆತಂದು ಆ
ನೀಚ ಕೌರವನ ಬಿಡಿಸಿದನು ಮುನ್ನ.

ಮತ್ಸ್ಯನರಮನೆಯಲ್ಲಿ ನಾವವಿತಿರಲು, ನಮ್ಮ
ಗೊತ್ತರಿಯಲೆಂದು ಜೀಮೂತನೆಂಬ
ಕುತ್ಸಿತನ ಕಳುಹಿದಿರಿ; ಗೋಗ್ರಹಣದಲಿ ನೀವು
ನಿತ್ಯಸಂಕಟವಿತ್ತಿರತ್ತಲಿರಲು.

ಹರಿಯ ಮುಖದಿಂದಲ್ಯೆದೂರ ಬೇಡಿಸೆ ಹಿಗ್ಗಿ
ಧುರವೆಂದು ನಿಶ್ಚಯಿಸಿದಿರಿ ಗರ್ವದಿ.
ದುರುಳರೊಬ್ಬೊಬ್ಬರನೆ ಕಾಲ್ ಹಿಡಿದು ಬಡಿದಾನು
ಪರಿಭವನನ್ಯೆದಿಸೆನೆ ಕೊಂದುಕೊಂದು.

ನೂರು ಮಕ್ಕಳ ತಂದೆ ಧೃತರಾಷ್ಟ್ರನೃಪ ನೀನು
ನೀರು ಬಾಯ್ಗಿಲ್ಲದೆಯೆ ಸತ್ತೆಯೆಂದು
ಊರೆಲ್ಲ ಹಳಿದು ಹಾರುವ ತೆರನ ಮಾಡುವೆನು
ಸಾರಿದೆನು ಕಿವಿಚಿಗುಟಿಕೊಳ್ಳೆಂದನು.

(ಮುಳಿಯ ಶಂಕರಭಟ್ಟ — ಚಂಡಭೀಮ ಕಾವ್ಯ)

---

## ಹಾಳೂರು

ಹಾಳೂರ ನೋಡು
ಹಾಳು ಗೋಡೆಗಳ,
ಹಾಳಾದ ಹೊಲಮುಡಿಯು
ಹಾಳು ಗುಡಿಯು.

ಬೋರೆ ಮರದಲಿ ಹಣ್ಣು
ತುಂಬಿ ಉದುರಿರಲು,
ಆರಿಸುವರಿಲ್ಲ ಅದ
ತಿಂಬರಿಲ್ಲ.

ಆಗಳಿನಲಿ ನೀರಿಲ್ಲ;
ಅದರ ತಳದಲ್ಲಿ
ಮಿಗೆ ಬೆಳೆದ ಮುಳ್ಳುಗಿಡ
ಪೊದೆಯಾಗಿದೆ.

ಅರೆಬಿದ್ದ ಮನೆಗಳು,
ನೆಲಸಮದ ಮನೆಗಳು,
ಮುರಿದ ಬಾಗಿಲ ಕಟ್ಟು,
ಹೊಲದ ಮುಟ್ಟು.

ಹಾದಿ ನಡೆಯುವರಿಲ್ಲ;
ದನಕರುಗಳಿಲ್ಲ;
ಬೀದಿಯಲಿ ಜನವಿಲ್ಲ;
ಮನೆಯೊಳಿಲ್ಲ.

ಮುಂಗಡೆಗಳನು ಗುಡಿಸಿ
ಸಾರಿಸುವರಿಲ್ಲ;
ರಂಗುಕಾರಣೆ ಇಡುವ
ನಾರಿಯಿಲ್ಲ.

ಅಂಗಡಿಯು ಮನೆಯಿದು,
ಕೊಟ್ಟುಕೊಳಲಿಲ್ಲ;
ಸಿಂಗರಿಸಿಕೊಂಡಿಲ್ಲಿ
ಸೆಟ್ಟಿಯಿಲ್ಲ.

ಸಂಜೆಯಾಗುತಲಿರಲು
ಬಾಲಕರ ನುಡಿಯು.

ಮಂಜುಳ ನಿನದವಿಲ್ಲ,
ಕೇಳಿಯಿಲ್ಲ.

ಮುಚ್ಚಿಕೊಳ್ಳಲು ಸಂಜೆ,
ಮನೆಮನೆಯ ಸೊಡರ
ಹಚ್ಚಿ ಬಾಗಿಲೊಳಿರಿಸೆ
ವನಿತೆಯಿಲ್ಲ.

ಇಂದುವಿಗೆ ಕಳೆಯೆಲ್ಲ
ತುಂಬಿರಲು ನೋಡಿ,
'ಚೆಂದು ಮಾಮು! ಬಾಬ'
ಎಂಬರಿಲ್ಲ.

ತಿಳಿಯ ತಿಂಗಳ ಹೊನಲು
ಹರಿಯುತಿರೆ ನೆಲದಿ,
ಒಲಿದ ಜವ್ವನಿಗರ
ಸರಸವಿಲ್ಲ.

ಅಂದು ನೋಡಿದ ಸೊಬಗು
ಏನಾಯಿತೆಂದು
ಚಂದಿರನು ನೋಡುವನು
ಮ್ಲಾನನಾಗಿ.

ದೇಗುಲದಿ ಸೊಡರಿಲ್ಲ,
ಹೂವು ಕಾಯಿಲ್ಲ,
ಗೂಗೆ ಕೂಗುತಲಿಹುದೆ
ಸೇವೆಯಲಿ.

ನೀಶಿಯಲ್ಲಿ ಮಕ್ಕಳನು
ಲಾಲಿಪರ ಬದಲು
ಹಸಿದ ತೋಳವು ನರಿಯು
ಊಳಿಡುವುವು

ಹಿಂದೆ ಬದುಕಿದ ಬದುಕು,
ಚೆಂದವೂ ಸೊಬಗೂ
ಅಂದಿಗೇ ಮುಗಿದುವು
ಇಂದಿಗಿಲ್ಲ.

ಅಂದಿನಾ ಸಂತಸವು,
ಮಂದಹಾಸಗಳು
ಕಂದಗಳ ಲಾಲನೆಯು
ಅಂದಿಗಾಯ್ತು.

(ಮಾಸ್ತಿ ವೆಂಕಟೇಶ ಅಯ್ಯಂಗಾರ—ಅರುಣ).

---

## ಕನಕಾಂಗಿ

೧

ಮೆರೆವ ಕಾಂಚೀಪುರದೊಳರಸುತನಗೈಯುತ್ತ
ದೊರೆಯೊರ್ವನಿರ್ದನತಿ ಪೂರ್ವಕಾಲದಲಿ.
ಚರಿತೆಯೊಳಗವನ ಕತೆಯಿಲ್ಲವಾದೊಡದೇನು.
ನರಪತಿ ಹಿರಣ್ಯಗರ್ಭನ ಕೀರ್ತಿ ಕಿರಿದೇ?

ತನ್ನ ಸಿರಿಯಂತಿಳೆಯೊಳಿನ್ನು ಸಿರಿಯಿಲ್ಲವೆಂ
ಬುನ್ನತಿಯೊಳಾ ನೃಪನು ಬಾಳಬೇಕೆಂದು,
ಚೆನ್ನಾದ ಭವನವೊಂದನು ರಚಿಸಿಯದರೊಳಗೆ
ಚಿನ್ನರನ್ನಂಗಳನು ತುಂಬಿರ್ದನತುಲ.

ಮನವೊಂದು ಮೆಚ್ಚಲದಕೊಂದು ಗಡಿಯೆಂದುಂಟೆ?
ಕೊನೆಗೂ ತನಗೆ ಬೇಕು ಬೇಕೆಂಬುದಲ್ತೆ?
ಧನರಾಶಿ ಬೆಳೆದಂತೆ ಧನದಾಶೆ ಹೆಚ್ಚುತಿರೆ
ಕನಕವೊಂದನೆ ಗಳಿಸಲಡಿಯಿಟ್ಟನರಸಂ.

ಜನರೆಂತು ಜೀವನವ ಮಾಡಿಕೊಂಬರು? ತಾನು
ಜನಪನೆನ್ನಿಸೆ ತನ್ನ ಕರ್ತವ್ಯವೇನು?

ತನಗಷ್ಟು ಧನವೇಕೆ? ನಾಳೆಯು ಗತಿಯದೇನು?
ಮನದೊಳಿವನೆಂದಾದರೂ ಚಿಂತಿಸಿದನೇ?

ಸಿರಿಗೆ ಮರುಳಾಗಿ ಸಿರಿಯನೆ ಬಯಸುವರಸನಿಗೆ
ಬರಿದಾಗಿ ತೋರಿದವು ಬೇರೆ ವಿಷಯಗಳು;
ಪರಿಯನೇವೇಳ್ವೆ? ತಾನೋರೆಗಣ್ಣಿಂದಲೂ
ಪೆರತೊಂದನಿನಿತಾದರೂ ನೋಡನವನು.

ಬರಿದೆ ದೂರುವುದೇಕೆ? ತನ್ನ ಮಗಳೊರ್ವಳಂ
ಪೊರೆಯುತಿರ್ದಂ ಪ್ರೀತಿಯಿಂದಲಾ ರಾಜಂ;
ಕರೆಯುತಿರ್ದಂ ಮುದ್ದು ಕನಕಾಂಗಿಯೆಂದವಳ
ಮೆರೆವ ಮೈಗದುವೆ ಚೆನ್ನಾದ ಪೆಸರೆಂದು.

ಬಾಲಕಿಯ ಮೋರೆಯನು ಮುದ್ದಾಡುವನು, ಮೇಣ್ ವಿ
ಶಾಲವಾದವಳ ಕಣ್ಗಳನೀಕ್ಷಿಸುವನು;
ಲೋಲತೆಯನಾನಲವು ಮಗುಳಾಕೆಯಂ ಪಿಡಿದು
ಲೀಲೆಯಿಂದಪ್ಪುವನು 'ಮುದ್ದು ಬಾ'ರೆಂದು,

ಮಗಳ ಮೈಸೊಬಗದು ಸುವರ್ಣ ಕೇದಗೆಯಿಂದ
ಮಿಗಿಲಾಗೆ ಕನಕಾಂಗಿಯೆಂಬ ಪೆಸರಿತ್ತು,
ಮಿಗೆ ಮಮತೆಯಿಂ ಪೊರೆಯುತಿರ್ದನಾರಂ ಮೆಚ್ಚಿ?
ಮಗಳನೆ? ಮೇಣ್ ಮೈಯ್ಯನೇ? ಪೇಳಲರಿದು.

ಕನಕಾಂಗಿಯಲಿ ಪ್ರೀತಿಯೆನಿತಾದೊಡೇನು? ಕಾಂ
ಚನ ಭವನದೊಳಗಾಕೆಗಂ ಹೋಗಬಿಡನು.
ದಿನರಾತ್ರಿಯೆಂದಿಲ್ಲದಾತನೊರ್ವನೆ ಪೋಗಿ
ಬಿನದಂಗೊಳುವನಲ್ಲಿ ಪುರುಷಾರ್ಥವಿದುವೆ?

'ಪಣವೆ ಬಾಳ್ವೆಯ ಪುರುಳು ಪೆರತೊಂದುಮಿಲ್ಲ' ಎಂ
ದುಣದುಡದೆ ಗಳಿಸಿ ಪೂಜಿಪರದನೆ ಕೆಲರು.
ಎಣಿಸರೇತಕೆ ನಾಳೆ ದೇಹವನೆ ಬಿಟ್ಟು ಧಾ
ರಿಣಿಯೊಳಿರದೆಲ್ಲರೂ ಪೋಪರೆಂದವರು?

೨

ರವಿ ಪಶ್ಚಿಮಕ್ಕಿಳಿದು ಕೆಂಬಣ್ಣದಿಂ ಪೊಳೆಯೆ,
ತವಕದಿಂ ಕಂಡದನು ಚಿಂತಿಸಿದನರಸಂ–
"ಬುವಿಯೊಳೆನಗಂತಪ್ಪ ಮಣಿಯಿಲ್ಲವೇಗೈವೆ?
ನವರತ್ನಗಳೊಳಿದುವೆ ನವರತ್ನಮಲ್ತೆ!"

ಕರೆಯಾಗಿ ಮುಳುಗುವನಕಂ ತಾನದನೆ ನೋಡಿ,
ಇರಲಾರದಲ್ಲಿ ಕಾಂಚನಭವನಕ್ಕೈದಿ,
ಬಿರುಸಾದದರ ಬಾಗಿಲನು ತೆರೆದೊಳಗೆ ಪೋಗಿ,
ತಿರಿಗಿ ಮುಚ್ಚಿದನದನು ಸಲೆ ಭದ್ರವಾಗಿ.

ಬೆಳೆಕೊಂದನುರಿಸಿದನು, ಬಳಿಯ ಮಂಚದ ಮೇಲೆ
ಕುಳಿತುಕೊಂಡನು, ತಾನು ಪಲಕಾಲದಿಂದ
ಗಳಿಸಿರ್ದ ಧನರಾಶಿಯುದು ತನ್ನ ಕಣ್ಮುಂದೆ
ಹೊಳೆಯುತ್ತಿರಲ್ಕಾತನಿಂತು ಚಿಂತಿಸಿದಾ:

"ತನುಮನಂಗಳನೊಪ್ಪಿಸಿಯುಮಕಟ ನಾಂ ಪಡೆದ
ಧನಮಿದುವೆ ರತ್ನಾಕರದೊಳೊಂದು ಬಿಂದು!
ಎನಿತು ಸಾಹಸಗೊಂಡರೇನು ಹೆಚ್ಚಿಸಲಳವೆ?
ಮನುಜಗಿಲ್ಲಿರ್ಪ ಕಾಲಂ ಕ್ಷಣಿಕಮಲ್ತೆ?"

"ಎಲವೊ, ನಿನ್ನಯ ಮನದ ಬಯಕೆ ತೀರಿದುದಿಲ್ಲ:
ಬಲುಧನಿಕನಾಗಿರುವೆ; ನಿನಗದಿನ್ನೆಂತು
ಸಲೆತೃಪ್ತಿಯಾಗುವುದು ಹೇಳೆ"ಂದು ದನಿಗೇಳೆ,
ತಲೆಯೆತ್ತಿ ನೋಡಿದನು ಬೆರಗಾಗಿ ರಾಜಂ.

ಮುಂದೆ ನಿಂದಿರ್ದಳೋರ್ವಳು ಚೆಲುವೆ ನಸುನಗುತ;
ಹೊಂದಿ ಪರಮಾಶ್ಚರ್ಯವನು ರಾಜನಂದು
ಸುಂದರಾಂಗಿಯುದಾರು ಮೇಣೆಂತೊಳಗೆ ಬಂದ
ಳೆಂದು ತಿಳಿಯದನಾಗಿ ಮಂಕಾಗಿ ನಿಂದಂ.

ಬೆರಗಾಗಿ ನಿಂದಿರೆ ಹಿರಣ್ಯಗರ್ಭನು, ತನ್ನ
ಪರಿಚಯುವನಾತಂಗೆ ತಾನೆ ಹೇಳಿದಳು;
"ಅರಸ! ಲೋಕದೊಳೆನಗೆ ಸಿರಿಯೆಂಬ ಹೆಸರಹುದು.
ಧರೆಯೊಳೆನ್ನನು ನೋಡಿದವರನಿಬರಿಲ್ಲ.

"ನಿನ್ನ ಪರಿತಾಪವನು ಕೇಳಿ ಮರುಕಂಗೊಂಡು
ಇನ್ನೇನು ಬೇಕೆಂದು ಕೇಳಲಿದೊ ಬಂದೆ,"
ಎನ್ನಲಾ ನೃಪತಿ ಧನದೇವತೆಯೆ ತಾನೊಲಿದು
ತನ್ನ ಮನೆಗೈತಂದಳೆಂದು ಹರ್ಷಿಸಿದಂ.

"ತಾಯೆ! ನೀನೆಮ್ಮ ಮನೆಗೊಲಿದು ಬಂದುದರಿಂದ
ಮಾಯವಾದುದುಯೆನ್ನ ದುರದೃಷ್ಟವೆಲ್ಲ;
ಶ್ರೀಯೆ! ನೀನೇ ಕೇಳದಿರಿಂ ಬೇಡುವೆನು ವರವ
ನೀಯೆನಗೆ ಮುಟ್ಟಿದುದು ಹೊನ್ನಾಗಲೆಂದು.

"ಇದರೊಳಾಂ ತೃಪ್ತಿಬಡುವೆನು ಮೇಲೆನಗೆ ಬೇಡ;
ಪದೆದೆನಗೆ ವರವಿತ್ತು ಕರುಣಸೆನ"ಲಾಕೆ
ಮುದವಾಂತು "ರಾಜ ನಿನಗದು ಬಂದಪುದು ನಾಳೆ
ನುದ ಕಾಲಕ್ಕೆ"ಂದು ತಾಂ ಮಾಯವಾದಳ್.

೩

ಬೆಳಗಾಯ್ತು! ನಿದ್ದೆಯಿಲ್ಲದೆ ರಾತ್ರಿಯೆಲ್ಲವಂ
ಕಳೆದ ರಾಜಂ ಜಗ್ಗನೆದ್ದು ನೋಡಿದನು
ತಳೆದುಕೊಂಡಿರ್ದ ಕಂಬಳಿ ಕನಕಮಯವಾಗಿ
ಹೊಳೆಯುತಿರ್ದುದು ಸಿರಿಯ ವರದ ಬಲದಿಂದ!

ಮಿಗೆ ಹರುಷದಿಂ ರಾಜನಾಗ ಕುಣಿಕುಣಿದಾಡಿ,
ಜಗಜಗಿಪ ಹೊಂಗಂಬಳಿಯನ್ನೆತ್ತಿಕೊಂಡು,
ಬಗೆಬಗೆಯೊಳದನು ನೆರೆ ನೋಡಿ ಸಂತಸಗೂಡಿ
ಹೊಗಳಿದನು ತನ್ನ ಭಾಗ್ಯೋದಯವನಂದು.

ಪರಿಕಿಸಲು ಮಂಚವನು ಮುಟ್ಟಿದನು; ಹೊನ್ನಾಯ್ತು!
ಅರಸನಾನಂದದಿಂದುಕ್ಕಿ ಹಾರಿದನು.
ಕರವು ಸೋಂಕಿದುದೆಲ್ಲ ಕನಕವಾಗುವುದೆಂದು
ಮರುಳನಂತೋಡಾಡಿದನು ಕೋಣೆಯೊಳಗೆ;

ಸಿಕ್ಕಿದುದನೆಲ್ಲ ಹೊನ್ನಾಗಿ ಮಾಡುವೆನೆಂದು
ಗಕ್ಕನಲ್ಲಿಂದಿಳಿದು ಬಂದಾನಾ ರಾಜಂ
ಇಕ್ಕಡೆಯೊಳಿರ್ದುದೆಲ್ಲವನು ಮುಟ್ಟಲ್ಕೆ ಮಿರು
ಗಿಕ್ಕಿದಂತೆಸೆದುದಾಗಲೆ ಚಿನ್ನವಾಗಿ.

ಬಂದು ಹೊಕ್ಕನು ತನ್ನ ಹೂದೋಟವನು ನೋಡ
ಲಂದವಾಗಿರ್ದುದದು ತನ್ನ ಸೊಬಗಿಂದ;
ಮಂದಾರ ಪಾರಿಜಾತಾದಿ ಪುಷ್ಪಗಳರಳಿ
ಗಂಧವಂ ಬೀರುತ್ತಲೆಸೆದಿರ್ದುವಲ್ಲಿ.

ತರತರದ ಪುಷ್ಪಗಳು ಬೀಸುತಿಹ ತಂಗಾಳಿ
ಗುರೆ ನಲಿಯುತಿರ್ದುವತಿ ಸಂತೋಷದಿಂದ;
ಪರಮಾತ್ಮನಿತ್ತ ಸೌಂದರ್ಯಮಿವಕಿರ್ದೊಡಂ
ನರನೀ ಹಿರಣ್ಯಗರ್ಭನಿಗೊಪ್ಪದಾಯ್ತು!

ಗಿಡದಿಂದ ಗಿಡಕೋಡಿ ಮೊಗ್ಗು ಹೂಗಳನೆಲ್ಲ
ಪಿಡಿದು ಸೌವರ್ಣಸುಮಗಳನಾಗಿ ರಚಿಸಿ
ಪೊಡವಿಪತಿ ತಾನೆಸಗಿದದ್ಭುತಂಗಳನಾಗ
ಕಡು ಮೊದದಿಂದ ನಿಡಿದಾಗಿ ನೋಡಿದನು.

ನರಪತಿ ಹಿರಣ್ಯಗರ್ಭನಿಗಾದ ತೋಷವನು
ಒರೆದು ತಿಳಿಸಲ್ಕರಿದು; ಸಿರಿಯೆ ವರಿಸಿರಲು
ಧರೆಯೊಳಾತನ ಸರಿಸಮಾನರಿರುವರೆ? ತಾನೆ
ಸಿರಿವಂತನೆಂದು ಬಲು ಹಿಗ್ಗಿದನು ರಾಜಂ.

ಪಣವೆ ಬಾಳ್ವೆಯ ಪುರುಳು, ಪೆರತೊಂದುಮಿಲ್ಲವೆಂ
ದೆಣಿಸಿದೀತನಿಗೆ ಧನದಮಲು ತಲೆಗೇರೆ,
ಕುಣಿಯುತಿರ್ದನು ಧನಸಮನ್ವಿತನು ತಾನಾಗಿ
ಉಣುವನೆಷ್ಟೆಂದು ನೋಡಲ್ಕಿಹುದು ಮುಂದೆ.

ಈ ಪರಿಯೊಳಂದು ಹೊನ್ನಿನ ತೋಟವನು ಗೈದು
ಭೂಪನಾತನ ಕಣ್ಗೆ ಹಬ್ಬವನು ಮಾಡಿ,
ಆ ಪೂಗಳಲ್ಲಿ ಕೆಲವನು ಕೊಂಡು ಮನೆಗಿನ್ನು
ಪೋಪೆನೆಂದಲ್ಲಿಂದ ತಾನು ತೆರಳಿದನು.

೪

"ಮಗಳೆ! ಕನಕಾಂಗಿ! ಏಳೇಳು, ಬೆಳಗಾಯ್ತು! ಹಾ
ಸಿಗೆಯೊಳಿನ್ನೆಷ್ಟು ಮಲಗುವೆ? ಬೇಗನೇಳು!
ಇಗೊ! ನೋಡು ನಿನಗೊಂದು ವಸ್ತುವನು ತಂದಿಹೆನು,
ಮುಗಿಯಲಿಲ್ಲವೆ ನಿನ್ನ ನಿದ್ದೆಯೇನಿಂದು?"

ಮಲಗಿರ್ದ ಮಗಳ ಮೈದಡವುತಾಕೆಯನೆಬ್ಬಿ
ಸಲು ಯತ್ನಿಸಲ್ಕೆ ತಾನಲುಗಾಡದಿರಲು.
ಸಲೆ ನಿದ್ದೆಯಲಿ? ಕೂಡಿರುವಳೆಂದರಿತು ರಾಜ
ನಲರ್ಗಳನು ಬಳಿಯೊಳಿಟ್ಟಲ್ಲಿಂದ ಪೋದಂ.

ಅನಿತರೊಳು ಚಾರನು ಫಲಾಹಾರಕಾಯ್ತೆಂದು
ವಿನಯದಿಂ ಬಿನ್ನವಿಸೆ, ಭೋಜನಾಲಯಕೆ
ಜನಪನನುಚರರೊಡನೆ ಹೋಗಿ, ಮಡಗಿರ್ದ ಹೊ
ನ್ನಿನ್ನ ಮಣೆಯೊಳನುವಾಗಿ ತಾಂ ಕುಳಿತುಕೊಂಡಂ.

ಒಂದು ಹರಿವಾಣದಲ್ಲಿ ತನಿವಣ್ಗಳಿರ್ದುವಿ
ನ್ನೊಂದು ಹರಿವಾಣದಲಿ ತುಪ್ಪದಲಿ ಹುರಿದ
ಬೂಂದಿ ಲಾಡುಗಳಿರ್ದುವಿನ್ನು ದೋಸೆಗಳು ಬೇ
ರೊಂದರಲ್ಲಿರ್ದುವರಸನಿಗೇನು ಕಡಿಮೆ?

ಮಿಸುನಿತಂಬಿಗೆಯಲ್ಲಿ ಸಕ್ಕರೆವೆರಸಿದ ಬಿಸಿ
ಬಿಸಿ ಹಾಲುಮಿತ್ತದನು ತಣಿಸಲ್ಕೆ ಬೇರೆ
ಎಸೆವೆರಡು ಪಾತ್ರೆಗಳನಿಟ್ಟಿರ್ದರಲ್ಲಿ; ಸಲೆ
ಹಸಿದಿರ್ದರಸನೊಡನೆ ಕೈಯನಿಕ್ಕಿದನು.

ದೊಸೆಯನು ಮುಟ್ಟಲದು, ಭಂಗಾರದಾಯ್ತು! ಪೊಡ
ವೀಶನಾಶ್ಚರ್ಯದಿಂ ಲಾಡು ತೆಗೆಯಲ್ಕೆ,
ಭಾಸುರ ಸುವರ್ಣದಾಯ್ತಾಗ ಬೆರಗಾಗಿ ತಾಂ
ಮೋಸಹೋದೆನದೆಂತು ತಿಂಬೆನಿದನೆಂದಂ.

ನರಪತಿ ಹಿರಣ್ಯಗರ್ಭವೇ ಭಾಗ್ಯ!
ಅರಸರೊಳಗವನೆ ಬಿಲು ಸಿರಿವಂತನು, ಕಣಾ!
ತರತರದಮೂಲ್ಯಭಕ್ಷ್ಯಗಳಿಂತು ಧರೆಯೊಳಗೆ
ಪರರಿಗೊದಗುವುವೆ ಲೋಕೈಕ ಧನಿಕನವಂ!

ಕೊರತೆಯೊಂದೇ ಬಾಯ್ಗೆ ರುಚಿಯಾಗದಾಸೆಯಿಂ
ತುರುಕಿಸಿದೊಡಂ ಗಂಟಲೊಳಗಿಳಿಯದಕಟಾ!
ಅರಸನುಣಲಾರದತಿಕಷ್ಟಬಡುತಿರ್ದನಾ
ಪರಿಯನೇವೇಳ್ವೆನೂಹಿಪುದೆ ಸುಲಭವಲಾ!

"ಮುಟ್ಟಿದುದು ಹೊನ್ನಾಗಬೇಕೆಂಬ ವರವನ್ನು
ಕೊಟ್ಟು ಕರುಣಿಪುದೆಂದು ಬೇಡುವವಸರದೊಳ್

ಕೆಟ್ಟಕಡೆಗೇನಾಗಬಹುದೆಂದು ಯೋಚಿಸದೆ
ಕೆಟ್ಟೆನಿನ್ನೇಗೈವೆ"ನೆಂದು ಚಿಂತಿಸಿದಂ.

"ಶಿವಶಿವಾ! ಸಂದೇಹವಾಗುವುದೆನಗೆ ಮುದ್ದು
ಗುವರಿಯುಂ ಮುಟ್ಟಿರ್ದೆನಯ್ಯೊ ಕನಕಾಂಗಿ!
ಜವದೆ ಬರುವವಳೇಕೆ ಬಾರದಾದೆಯೊ?" ಎಂದು
ತವಕದಿಂದೋಡಿದನು ತಳಮಳಂಗೊಳುತ.

೫

"ಕನಕಾಂಗಿ! ಮಗಳೆ! ಮಾತಾಡೆನ್ನೊಳೇಕಿಂತು
ಮುನಿದಿರುವೆ? ಶಿವಶಿವಾಃ ಸಿರಿಗಾಸೆವಟ್ಟು,
ತನುಜೆಯನು ಕೊಂದೆನೆ? ವರವನೇಕೆ ಬೇಡಿದೆನೋ?
ಎನಗೆ ಲೋಕದೊಳಿನ್ನು ತಂದೆಯೆನ್ನುವರಾರ್?

"ಮಕ್ಕಳಿಲ್ಲದೆ ಬಹಳ ಚಿಂತೆಯಿಂದಿದ್ದೆನಗೆ
ಸಿಕ್ಕಿದುದು ಹೆಣ್ಣಾದೊಡದನು ಮಗನೆಂದೇ
ಅಕ್ಕರದಿ ಪೊರೆದು ನಾನೇ ಮೃತ್ಯುವೆನಿಸಿದೆನೆ?
ಅಕ್ಕಟಾ! ಎನ್ನವೊಲ್ ಪಾಪಿಯೆನ್ನಿಹನೇ!

"ಧನವೊಂದರಾಸೆಯಿಂದಿನಿತಾದುದೆನ್ನ ಮಗ
ಳನು ಕೊಂದೆನಕಟ! ಇನ್ನು ಣಲಾರದಾನೂ
ಕೊನೆಗಾಣಲಹುದು; ಮತ್ತಾರಿಗೀ ಧನವು? ಸು
ಮ್ಮನೆ ಕಳೆದೆನೀ ಬಾಳ್ವೆಯನು ಮೂರ್ಖನಾಗಿ!"

"ಅರರೇ! ಇದೇನು? ನಿನಗೇನಾದುದೀಗ? ಭೂ
ವರನೆ, ವರವಿತಾಯ್ತು; ದುಗುಡವೇಕಿನ್ನು?
ಪರಿಯಿದೇನಂದು ಸಲೆ ತೃಪ್ತಿಬಡುವೆನು, ಬೇರೆ
ವರವೆನಗೆ ಬೇಡವೆಂದೂರೆದಿರ್ದೆಯಲ್ತೆ?"

ಮರಳಿ ಸಿರಿ ಬಂದು ಮಾತಾಡಿಸುತ್ತಿರಲು, ತಾ
ನರಸನಾಕೆಯ ಕಾಲ್ಗೆರಗಿ ಬೇಡಿಕೊಂಡಂ;
"ವರದೆ! ಸಾಕೆನಗೆ ಧನದಾಸೆಯಿನ್ನಿಲ್ಲ. ನೀಂ
ಕರುಣಿಸೆನ್ನಯ ಮಗಳನೆನಗೆ ಕೊಡು, ತಾಯೆಃ"

“ಜನಪ ಪೇಳಾವುದು ನಿನಗೆ ಬೇಕು, ಧನವೊ ಭೋ
ಜನವೊ? ಈ ಕನಕಾಂಗಿಯೋ? ನಿನ್ನನಪ್ಪು
ಎನುತಪ್ಪಿಕೊಳುತಿರ್ದ ಕನಕಾಂಗಿಯೊ? ಪೇಳು”
ಎನಲು ನೃಪನಂದು ಕಣ್ಣೀರ್ಮಿಡಿದು ನುಡಿದಂ.

“ಬೇಡೆವೆನಗೀ ಧನವು; ಕೊಟ್ಟ ವರದಿಂದ ದಯ
ಮಾಡಿ ಬಿಡಿಸೆನ್ನನವ್ವಾ ಸಿರಿಯೆ! ನಿನ್ನಂ
ಬೇಡುವೆನು, ಮುದ್ದು ಕನಕಾಂಗಿಯನೆ ಮಗುಳೆನಗೆ
ನೀಡಿ ಕಾಪಾಡೆನ್ನ”ನೆಂದು ವಂದಿಸಿದಂ.

“ಏಳು ವತ್ಸನೆ! ಏಳು! ತಿರ್ಥಮಂ ತಂದವಳ
ಮೇಲೆ ಚಿಮುಕಿಸು; ನಿನ್ನ ಮಗಳೇಳ್ವಳಾಗ;
ಕೇಳು, ನೀನೋರಂತೆ ತೋಟವನು ಸರಿಗೈದು
ಬಾಳು ಪಲಕಾಲವಿನ್ನಾಳು ಸುಖದಿಂದ.”

ಅರಸನೆದ್ದಾಗ ಸಿರಿ ಮಾಯವಾಗಿರ್ದಳವ
ಸರದೆ ನಾನೇ ಹೋಗಿ ತೀರ್ಥವನು ತಂದು
ಎರಚಿದನು; ಮಗಳೆದ್ದು “ಅಪ್ಪಾ! ಇದೇನ”ಂದು
ಬೆರಗಾಗಿ ಕೇಳಲರುಹಿದನು ಸಕಲವನು.

ಬಳಿಕ ತೋಟಕ್ಕೈದಿ ತೀರ್ಥವನು ಚಿಮುಕಿಸಲು
ನಳನಳಿಪ ಬಳ್ಳಿಗಳು ಮಗುಳಾದುವಲ್ಲಿ;
ಇಳೆಯಾಣ್ಮನಂದು ಮೊದಲಾಗಿ ಧನಲೋಭವ
ನ್ನುಳಿದು ಸತ್ಕಾರ್ಯದಿಂ ಕೀರ್ತಿಯುತನಾದಂ.

(ಉ. ಮ. ರಾ.)

## ಸಾವಿತ್ರೀಜನನ

ಕೇಳು ಧರ್ಮಜ! ಮದ್ರದೇಶವ
ನಾಳುತಿರ್ದನದೊರ್ವನವನೀ
ಪಾಲಪುಂಗವನಶ್ವಪತಿಯೆಂದೆಂಬ ಪಾರ್ಥಿವನು.
ಹೇಳಲೇನವನಖಿಳಸದ್ಗುಣ
ಶಾಲಿ; ನೀತಿವಿಶಾರದನು, ಸುವಿ
ಶಾಲಕೀರ್ತಿ. ಪರೇಂಗಿತಜ್ಞನುದಾರಮತಿಯುತನು.

ಕೇಳು ಜನಪತಿ! ತನ್ನೃಪನ ಸತಿ
ಮಾಳವೀನಾಮದಲಿ ಮೆರೆವಳು,
ಹೋಲಿಸಲು ಸೌಂದರ್ಯದೊಳು ರತಿದೇವಿಗೆಣೆಯಹಳು;
ಹೇಳಲಸದಳವವಳ ಗುಣವ, ಸು
ಶೀಲೆ, ಪತಿಗನುಕೂಲೆಯಾಶ್ರಿತ
ಪಾಲೆ, ಗುಣಮಣಿಮಾಲೆ, ಕರುಣಾವಾಲಿಯಾ ಲೋಲೆ.

ಜನಪ! ಕೇಳಾ ಕಾಂತೆ ಮಕ್ಕಳು
ತನಗುದಿಸಲಿಲ್ಲೆಂಬ ಚಿಂತಾ
ವನಧಿಯೊಳು ಮಿಗೆ ಮುಳುಗಿಹುದನರಿದವನಿಪತಿ ತಾನು
ಇನಿಯಳನು ಬೆಸಗೊಂಡನೇತಕೆ
ಮನದ ದುಗುಡವಿದೆಂದು, ಬಳಿಕಾ
ವನಿತೆ ಕಂಬನಿದುಂಬಿ ನುಡಿದಳು ತನ್ನ ಪತಿಯೊಡದೆ.

"ಭೂವದೂವಲ್ಲಭನೆ, ನಿನ್ನನು
ಕೈವಿಡದ ನನಗೇನು ಕೊರತೆ? ಮ
ಹಾವಿಭವದೊಳು ಬಾಳ್ವೆನಾದೊಡೆಮೇನನುಸಿರ್ದಪೆನು?
ಭೂವಿನುತನಹ ಸುತನ ಪಡೆದು ಮ
ನೋವಿನೋದನನಾಂಪ ಪುಣ್ಯವ
ನಾವು ತರಲಿಲ್ಲೆ"ನುತ ಕಂಬನಿದುಂಬಿದಳು ಕಾಂತೆ.

"ತೂಗುದೊಟ್ಟಿಲೊಳಿಟ್ಟು ಮಗುವನು,
ಜೋಗುಳವ ಪಾಡುತ್ತೆ ಮಲಗಿಸಿ,
ರಾಗದಿಂ ಮನೆಗೆಲಸಗಳ ಮಾಳ್ಪನಿತರೊಳಗೆದ್ದು,
ಕೋಗಿಲೆಯ ದನಿಯಣುಗನಳಲೊಡ
ನಾಗ ಬಂದೆದೆಯೂಡಿ ನೇಹದಿ
ಸೋಗಿಲೊಳಗಿಟ್ಟಾಡಿಸುವಳೇಂ ಧನ್ಯಳೋ ಜಗದಿ!"

"ವನಜಗಂಧಿಯೆ ನಿನ್ನ ನುಡಿ ನಿಜ,
ವಿನಯಹೀನನ ವಿದ್ಯೆಯೂ ನಂ
ದನನ ಪಡೆಯದ ನರನ ಸಿರಿಯೂ ಜಗದಿ ನಿಷ್ಫಲವು.
ವನಿತೆ 'ನಾಪುತ್ರಸ್ಯಗತಿ' ಎಂ
ದೆನುತೊರೆವುದಾಮ್ನಾಯವದರಿಂ
ತನುಜರುದಿಸಲದೊಂದುಪಾಯುವ ಪೇಳ್ವೆ ಕೇಳ್"ಂದಾ.

"ಪರಮಸಾವಿತ್ರೀವ್ರತವನಾ
ಚರಿಸಿದರೆ ಸಂತಾನಲಾಭವು
ದೊರಕುವುದು ನಿಜವೆಂದು ಕೇಳ್ದಿಹೆ ನಾನು ಗುರುಮುಖದಿ.
ವಿರಚಿಸುವೆನದ ಭಕ್ತಿಯಿಂದೆಲೆ
ತರುಣಿ, ಕೇಳ್ ಸಾವಿತ್ರಿಯೆ ತಾಂ
ಕರುಣಿಪಳು ಸಂತತಿಯ ನೀಂ ಸಂತೈಸಿಕೊಳ್ಳೆ"ಂದಾ.

ಆ ಮಹೀಪತಿ ತಪ್ಪದೀ ಪರಿ
ನೇಮದಿಂದಾಚರಿಸುತಿರೆ, ಕೇಳ್
ಸೋಮಕುಲಜನೆ, ಕಳೆದುವೈ ಹದಿನೆಂಟು ವರುಷಗಳು.
ಆ ಮಹಾ ಸಾವಿತ್ರಿ ಮೆಚ್ಚುತ
ಹೋಮಕುಂಡಾಂತರದೆ ತನ್ನಯ
ರಾಮಣೀಯಕವಾಂತ ರೂಪವ ತೋರಿದಳು ನೃಪಗೆ.

ಮೆಚ್ಚಿದೆನು ನೃಪತಿಲಕ ನಿನ್ನಯ
ಸಚ್ಚರಿತ ಸುಬ್ರಹ್ಮಚರ್ಯಕೆ,
ನಿಚ್ಚಲೂ ನೀಂ ನಡೆಸಿದೀ ಜಪಹೋಮದಾನಕ್ಕೆ

ಮೆಚ್ಚಿದೆನು; ಬೇಕಾದ ವರಗಳ
ನುಚ್ಚರಿಸು ನಾಂ ಕೊಡುವೆನೆನೆ ಕೇ
ಳ್ದುಚ್ಚರಿಯ ತಾಳುತ್ತಲಾ ನೃಪನೆರಗಿದನು ಪದಕೆ.

"ತಾಯೆ, ಸಂತಾನವೆ ಮನುಷ್ಯನಿ
ಕಾಯಕಿಹಪರಗಳಲಿ ವಿಪುಲ
ಶ್ರೀಯುವನ. ಮಾಡುವುದೆನುತ ಮುನಿವರರು ನುಡಿವುದರಿಂ
ಈಯುಬೇಕೌ ಬಹು ಸುತರ, ಮುನಿ
ಗೇಯೆ, ನೀಂ ದಯುದಿಂದಲೆನ್ನನು
ಕಾಯುಬೇಕೆ"ಂದೆರಗಿದನು ಸಾವಿತ್ರಿಯುಡಿಗಳಿಗೆ.

"ಎಲೆ ನೃಪತಿ, ನಿನ್ನಿಷ್ಟವನು ನಾಂ
ತಿಳಿದಿರುವೆನೈ ಕೇಳು ನಿನ್ನಯ
ಲಲನೆಯುದರದೊಳೊಂದು ಕನ್ಯಾರತ್ನವುದಿಸುವುದು;
ಸಲಿಸಿರುವೆನೀ ವರವ ಮನದೊಳು
ಕಳವಳಿಸಬೇಡೆ"ಂದು ನುಡಿದಾ
ಬಳಿಕಲಂತರ್ಧಾನವನು ಹೊಂದಿದಳು ಸಾವಿತ್ರಿ.

ಧರಿಸಿದಳು ಗರ್ಭವನು ತದ್ಭೂ
ವರನ ಸತಿ; ಸಿತಪಕ್ಷಚಂದ್ರನ
ತೆರದಿ ಗರ್ಭವು ದಿನದಿನಕ್ಕಭಿವೃದ್ಧಿಯನು ಪಡೆಯೆ,
ಹರಿಸಮಿಗೆ ನವಮಾಸ ತುಂಬಲು
ಶರಧಿಯೊಳು ಸಿರಿ ಜನಿಸಿದಂತಾ
ಅರಸಿಯುದರದಿ ಹೆಣ್ಣು ಮಗು ಹುಟ್ಟಿತು ಸುಲಗ್ನದಲಿ.

ಎಲೆ ನೃಪತಿ, ಕೇಳಶ್ವಪತಿಯಾ
ಬಳಿಕ ಸಾವಿತ್ರಿಯ ವರದಿ ನಿಜ
ಕುಲದೊಳುದಿಸಿದ ಪುಣ್ಯಲಕ್ಷಣಕನ್ಯಕಾಮಣಿಗೆ
ಬಳಿಸಿ ಮುದದಿಂ ಜಾತಕರ್ಮವ
ನಲವಿನಿಂ ಸಾವಿತ್ರಿಯೆಂದೇ
ಲಲನೆಯಿಂದೊಡಗೂಡಿಗೈದನು ನಾಮಕರಣವನು.

ನಗೆಮೊಗದ, ತೊಳಗುವ ಕಪೋಲದ,
ಚಿಗುರನಣಕಿಪ ಕರತಳದ, ಸಂ
ಪಗೆಯ ಪೋಲುವ ನಾಸಿಕದ, ಪೊಗರುಗುವ ಚೆಂದುಟಿಯ,
ಬೊಗಸೆಗಣ್ಣಿನ, ತುಂಬಿಗುರುಳಿನ,
ಮಗಳ ಚೆಲುವಿಕೆಯನು ನಿರೀಕ್ಷಿಸಿ
ಬಗೆಯೊಳಾನಂದಿಪರು ಜನನೀಜನಕರಡಿಗಡಿಗೆ

ನೋಡಿ ತಣಿಯರು, ಮಗಳ ಸಿಂಗರ
ಮಾಡಿ ತಣಿಯರು, ನೇಹ ಮಿಗೆ ಮು
ದ್ದಾಡಿ ತಣಿಯರು, ಮನದೊಳಡಿಗಡಿಗಣುಗಿ ಬೇಡಿದುದ
ನೀಡಿ ತಣಿಯರು, ನಿಚ್ಚಲವಳೊಡ
ನಾಡಿ ತಣಿಯರು, ಹರುಷಗಡಲೊಳು
ಮೂಡಿ ಮುಳುಗುವರವಳ ಜನನೀಜನಕರನವರತ.

(ಬಸವಪ್ಪ ಶಾಸ್ತ್ರಿ—ಸಾವಿತ್ರಿ)

## ಇಂದುಮತೀಸ್ವಯಂವರ

ಮಂಗಳಾನಕ ಮೊಳಗುತಿರೆ, ಹೊಸ
ಹೊಂಗೆಲಸದಂದಣದಿ ಮದುವೆಯ
ಸಿಂಗರದೊಳೆಸೆವಿಂದುಮತಿ ಮಂಡಿಸುತ ಪೊರಮಟ್ಟು
ಅಂಗನೆಯರೊಡವರಲು, ಮದುವೆಯ
ರಂಗದೆಡೆಯನು ಹೊಕ್ಕು ಮಂಚದ

ಸಿಂಗರದ ಕೇರಿಯೊಳು ವರನನು ವರಿಸಲೈದಿದಳು.
ಮಡಿದಿಯಾ ಪರಿ ನಡೆಯೆ, ಕಂಚಿಯು
ಪಡಿಯರಿತಿ ನಡೆತಂದು ಕಾಂತೆಯ
ನೊಡನೆ ಕರೆದೈದಿದಳು ನೃಪನೆಡೆಯಿಂದ ನೃಪನೆಡೆಗೆ;
ಜಡರುಹದ ಬಳಿಯಿಂದ ಜಡರುಹ
ದೆಡೆಗೆ ಮಾನಸರಾಜಹಂಸಿಯು
ನೊಡನೆ ಕೊಂಡೊಯ್ವನಿಲಜನಿತತರಂಗಮಾಲೆವೊಲು.

"ತಂಗಿ, ನೋಡೀ ತುಂಗಬಾಹುವ
ನಂಗನೃಪನಿವನಂಗವಟ್ಟದ
ಭಂಗಿಗಮರಾಂಗನೆಯರೀ ಕಣ್ಸೋತು ಕಾಡಿದರು;
ಅಂಗವರಿದವರಿಂದ ತುಂಗವು
ತಂಗಜಂಗಳನೊಲಿಸಬಲ್ಲನಿ
ವಂಗೆ ಸುರಪುಂಗವನ ಸಂಪದವಿಲ್ಲಿ ಸಲ್ಲುವುದು"

ಎಂದ ನುಡಿಯನು ಕೇಳಿ, ನೃಪಸುತ
ನಿಂದ ನಯುವನ ಸೆಳೆದು, ಮೆಲ್ಲನೆ
"ಮುಂದೆ ನಡೆ" ಯೆಂದಾ ಸುನಂದೆಗೆ ಬೆಸಸಿದಳು ಕೂಡೆ.
ಸುಂದರನು ತಾನಲ್ಲದಿಲ್ಲವ
ನಂಡವರಿದವಳಲ್ಲದಿಲ್ಲವ
ಳೆಂದೊಡೇಂ ಮೆಚ್ಚಿದಳೆ? ಲೋಕವೆ ಭಿನ್ನ ರುಚಿಯಲ್ತೆ!

"ಇವನವಂತೀಶ್ವರನು, ನಿಡದೋ
ಳವನು, ಹೇರುರದವನು, ತೆಳ್ನಡು
ವವನು, ಮುಂಗಡೆ ಸಂಗಳಿಸುವನು ಕಣ್ಗೆ ಕೌತುಕವಾ,
ರವಿಯನಂದಾ ವಿಶ್ವಕರ್ಮನು
ಜವದೆ ತಿರುಗುವ ಸಾಣೆವಾಯೊಳು
ಸವೆಯೆ ಕೀಳುವ ಪದದೊಳುದಯುಂಬಡೆದ ಪಾಂಗಿನಲಿ

"ಈತನನು ಕೈಮಿಗುವ ಜವ್ವನ
ದಾತನನು ಕೈವಿಡಿದು ಶಿಪ್ರೆಯ
ಶೀತಳದತೆಳ್ದೆರೆಯ ತನಿಸೋಂಕಿನಲಿ ತಂಪಾಂತ
ವಾತಪೋತದ ಲಲಿತವಲವಕೆ
ಸೋತು ಮೆಲ್ಲನೆ ತಲೆಯ ನೊಲೆವ ಕು
ಜಾತಕೋಟಿಯ ಬನದಿ ಬಿನದಿಪ ಬಯಕೆ ನಿನಗುಂಟೆ?

ಎಂದೆನುತ ಪಡಿಯರಿತಿ ನುಡಿದೊಡ
ಮಿಂದುಮತಿಯಾ ಬಂಧುಪದ್ಮಾ
ನಂದನನು ವಿಕ್ರಮವಿಶೋಷಿತಶತ್ರುಪಂಕನನು

ಒಂದುವೊಡೆ ಬಗೆದಂದಳಿಲ್ಲಳ
ವಿಂದಬಂಧುವಿನಲ್ಲಿ ಭಾವವ
ನೊಂದಿಸದೆ ಪಿಂದೆಗೆವ ಕೋಮಲ ಕುಮುದಿನಿಯು ತೆಳದಿ,

“ಕದನದೆಡೆಯೊಳು ತೋಳ ಸಾಸಿರ
ವುದಿಸಿದವೊಲರಿಗಳನು ಭಂಗಿಸಿ,
ಪದಪಿನಿಂ ಪದಿನೆಂಟು ಕುರುವದಿ ಯೂಪಗಳ ನಿಲಿಸಿ,
ಪುದುವೆನಿಸಿದಾ ರಾಜಶಬ್ದಕೆ
ಪದವೆನಿಸುತವೆ ಕಾರ್ತವೀರ್ಯಾ
ಭಿಧೆಯು ಯೋಗಿಯುದೊರ್ವನೊಪ್ಪಿದನಲ್ತೆ ಪೂರ್ವದಲಿ!

“ಆತನನ್ವಯದಲ್ಲಿ ಜನಿಸಿದ
ನೀತನಾಗಮುವೃದ್ಧಸೇವಾ
ಖ್ಯಾತನೊಪ್ಪುವನಾ ಪ್ರತೀಪನೆನಿಪ್ಪ ಪೆಸರಿನಲಿ;
ಈತನಲೆ ಕರ್ಚಿದನು ಸಾಗರ
ಜಾತೆಗಾಶ್ರಯುದೋಷದಿಂ ಸಂ
ಜಾತವಾದತಿತರಳೆಯೆಂಬಪವಾದಪಂಕವನು.

“ತಂಗಿ, ನೀಂ ಮಾಹಿಷ್ಮತೀನಗ
ವಾಂಗನೆಯು ನವಕಾಂಚಿಯುಂದದಿ
ಕಂಗೊಳಿಪ ನರ್ಮದೆಯು ನಿರ್ಮಲಜಲದ ವೇಣಿಯನು
ತುಂಗಹರ್ಮ್ಯಾಳಿಯೊಳು ನಿಂದು ಕ
ಡಂಗಿ ನೋಡುವ ಬಯಕೆವಡೆಯೊಡೆ
ತುಂಗಭುಜನುತ್ಸಂಗದೊಳು ಸಿರಿಯಾಗಿ ಕಂಗೊಳಿಸು.”

ಗಾಡಿಕಾತಿಯು ನಯನಕಾತನ
ಗಾಡಿಸವಿಯು ಸೂಸಿದೊಡಮೊಡ
ಗ್ಗೂಡಿಸಿದುದಿಲ್ಲವಳ ಹೃದಯದಿ ವರಿಸುವಾಸೆಯನು;
ಮೂಡಿದಾ ಶರದದೊಳು ಮುಗಿಲುಗ
ಳೋಡಿ ನಿರ್ಮಲವಾದ ನಭದೊಳು
ಗಾಡಿವಡೆದೆಸೆವಿಂದು ನಳಿನಿಗೆ ರುಚಿಸದಂದದಲಿ.

“ಆ ನೆಗಳ್ದ ರಘುಭೂಮಿಜಾನಿಗೆ
ಸೂನುವೆನಿಸಿದನಜನೃಪಾಲನು
ಸುನುವಾದಂತಾ ಜಯಂತನು ದೇವರಾಜನಿಗೆ.

* * * *

“ಕುಲದ ಕಾಂತಿಯು ವಯದ ವಿನಯದಿ
ಕಲಿತ ಗುಣಗವದ್ಯೆಸಿರಿಗೆ ತಾ
ಯ್ನೆಲೆಯೆನಿಸಿ ಬೆಳೆವತ್ತು ನಿನ್ನೊಳಗೋರಗೆಯು ಪಡೆವ
ಚೆಲುವುವಡೆದೀ ನೃಪಕುವೂರಕ
ತಿಲಕನನು ಕೈವಿಡಿದು ಕರುಣಿಸಿ
ಸಲಿಸು ರತ್ನಕೆ ಚಿನ್ನದೊಡನೊಡವೆರಿವ ಸಂಪದವಾ”

ಎಂದು ತನಗೆ ಸುನಂದೆಯೊರೆದುದ
ನಿಂದುಮತಿಯಾಲಿಸುತ ಮಿಗುವೊಲ
ವಿಂದ ಲಜ್ಜೆಯನಿನಿಸಡಂಗಿಸಿ, ನಗುವ ನಯನಗಳ,
ಕಂದದಿಂದೀವರದ ಮಾಲೆಯು
ನಂದಮಿಗೆ, ನೃಪನಂದನನ ಗೆರೆ
ಯಿಂದ ರಾಜಿಪ ಕಂಧರದಿ ಕೈಗೊಳಿಸಿ ವರಿಸಿದಳು.

ಕೊಂಕುಗುರುಳಿನ ಕಾಂತೆ ಕಾಮನ
ಸಂಕಲೆಗೆ ಸಿಲುಕಿದೊಡವೊಡನೊಡ
ನೌಂಕುತಿಹ ಲಜ್ಜೆಯೊಳು ನುಡಿಯನೆ ಮೋನದಿಂದಿರಲು,
ನೂಂಕಿ ನೆಗೆತಹ ಸಿಬಿಡಿತರ ಪುಳ
ಕಾಂಕುರಂಗಳು ಹೊಮ್ಮಿ ಹೊರಗ
ಣ್ಗೌಂಕಿ ಹಿಸುಣಾಡಿದುವು ತನ್ನಯ ಹೃದಯಭಾವವನು.

ಅಂತವಳು ಮನಸೋತು ನೃಪತಿಯು
ಮುಂತೆ ನಿಲೆ, ನಗೆವೊಗದ ಸೊಬಗಿನ
ಸಂತಸದಿ ಪಡಿಯುರಿತಿ ನೃಪತನುಭವೆಯನೀಕ್ಷಿಸುತ,
“ಅಂತರಂಗಕೆ ಸೊಗಸದಿರ್ದೊಡೆ
ಮುಂತೆ ನಡೆದಪೆ”ವೆಂದೆನಲು, ನಯ
ನಾಂತಕುಟಿಲವಿಲೋಕನದಿ ನೃಪತನುಜೆ ನೋಡಿದಳು.

ಮಂಗಳದ ಪರಿಮಳದ ಪುಡಿಯೊಳು
ಸಂಗಳಿಸಿ ಕೆಂಗುಡಿಯ ಕಳೆದಳೆ
ದಂಗವಡೆದನುರಾಗವೆನೆ ಕಂಗೊಳಿಪ ಮಾಲೆಯನು
ಅಂಗಳಿಂದಾ ತುಂಗಭುಜನ ಮ
ನಂಗೊಳಿಪ ಕಂಠದಲಿ ಸಿಂಗರಗೊಳಿಸಿದಳು ಬಳಿಕ.

"ಮುಗಿಲ ಮುಸುಕನು ಬಿಸುಟ ಶಶಿಯನು
ತೆಗೆದು ತಳ್ಕಿಸಿದಿಂದುಕಾಂತಿಯೋ?
"ಬಗೆವುಗುವ ತೊರೆಯೆರೆಯನೊಡೆವೆರೆದೆಸೆವ ಸುರನದಿಯೊ?
"ಸೊಗಸುವೀ ಸಮಗುಣರ ಯೋಗದ
ಬಗೆಯ ಬಣ್ಣಿಸಲರಿದೆ"ನುತ ನಾ
ಡುಗರೊರೆವ ನುಡಿಯಿರಿದುದವನೀಧರರ ಕಿವಿಗಳನು.

ಒಂದು ಕಡೆಯೊಳು ವರನ ಪಕ್ಕದ
ಮಂದಹಾಸದ ಮೊಗದ ಮಂದಿಗ
ಳೊಂದುಕಡೆಯೊಳು ಕಂದುಮೋರೆಯ ನೃಪರ ಮಂದಿಗಳು
ಸಂದಣಿಸೆ, ಸಭೆ ಸೊಗಸಿತುಷದೊಳ
ಗೊಂದು ಕಡೆಯೊಳು ನಗುವ ಕಮಲಗ
ಳೊಂದು ಕಡೆಯೊಳು ಮುಗಿವ ನಳಿನಗಳೆಸೆವ ಕೊಳದಂತೆ.

(ಎಸ್. ಜಿ. ನರಸಿಂಹಾಚಾರ್ಯ— ಅಜಸ್ವಪಚರಿತೆ.)

---

## ಉದಯಕಾಲ

ಮನೆಯ ಹೆಂಗಸರೆದ್ದು ಕೆಲಸವನು ಮಾಡುತಿರೆ,
ದಿನಕರನು ಪೂರ್ವದಲಿ ತಾನೆದ್ದನೆಂದು
ಮನದೊಳಾಂ ಗ್ರಹಿಸುತಾಗಲೆ ಹಾಸಿಗೆಯಿಂದೆದ್ದು.
ವನನಿಧಿ*ಗೆ ಬಂದೆನಾಂ ಮೀಯಲೆನುತಂದು.

ಸಾಲುಮರಗಳ ನೆಳಲು ಮಾರ್ಗದೊಳೆ ಮಲಗಿರಲು
ಏಳದಿರೆ ಹಕ್ಕಿಗಳು ಗೂಡಿನಿಂದಂದು,
ಮೇಲೆ ನೀಲಾಂಬರದೊಳೆಸೆವ ತಾರಾಧಿಪನ
ಓಲಗಂ ಮೆರೆದಿರಲು ತಿಳಿದೆನಿರುಳೆಂದು.

ನೆನಪಾದುದಾಗ ನೆರೆಮನೆಯ ಬಸುರಿಗೆಯೆಮ್ಮ
ಮನೆಗೆ ಭೋಜನಕಂದು ಹೇಳಿದುದರಿಂದ,
ಅನಿತು ಬೇಗನೆಯೆದ್ದು ಕೆಲಸಕಾರಂಭಿಸಿದ
ರೆನಗೆ ತಿಳಿಯದೆಯೆದ್ದು ಬಂದೆ ಜವದಿಂದ.

ಬಂದಾದುದಿನ್ನು ಮನೆಗೇಕೆ ಹಿಂದಿರುಗಲೆಂ
ದೊಂದು ಬಂಡೆಯ ಕಲ್ಲೊಳೊರಗಿದೆನು; ಮುಂದು
ಚಂದಮಾಗೊಪ್ಪುತಿರ್ದುದು ಪೂರ್ವ ದಿಕ್ಕಿನಲಿ
ಚಂದ್ರಕಾಂತಿಯಲಿ ಪಶ್ಚಿಮಘಟ್ಟಮಂದು.

ಏವೇಳ್ವೆನದರ ಸೊಬಗಂ? ಮೊದಲೆ ನುಣ್ಣಗಿ
ರ್ದಾವೆಟ್ಟವಂದು ಹಿಮದಿಂದ ಚೆಲ್ವಾಗಿ
ತೀವಿದಾ ಬೆಳದಿಂಗಳಲ್ಲಿ ಕಂಗೊಳಿಸಿದದು;
ಭಾವಿಸಲ್ಕರಿದದರ ಶೋಭೆ ನಿಜವಾಗಿ.

ತಿಳಿನೀರಿನಲಿ ಚಂದ್ರಕಿರಣಗಳು ನಿಶಿಯೆಲ್ಲ
ಮುಳುಗಿ ಮಿಂದುದರಿಂದ ನೀರು ಸುಧೆಯಂತ
ಹೊಳೆಯಲದನುಂಡು ಮೀಂಗಳು ಕುಣಿಯುತಿರ್ದುವಾ
ಗಳೆ ಕಲ್ಲಿನಿಂದಿಳಿದು ಬಂದೆ ನಾಂ ಮುಂದೆ.

---

*ಕಾರ್ಕಳದ ರಾಮಸಮುದ್ರ.

ಮುಖಮಜ್ಜನಾದಿಗಳನಾಗ ತೀರಿಸೆ ತೋರ್ಷ
ಶಿಖರದೊಳು ಮೆರೆಯಲೆಳೆಗೆಂಪು ತಾಂ ಕಮಲ
ಸಖನೈತರಲ್ಕಿನ್ನು ದೂರವಿಲ್ಲೆಂದು ಸಂ
ಮುಖನಾಗಿ ನಿಂದು ವಂದನೆಗೈದೆನಮಲ.

ಒಡನೆ ಸೂರ್ಯನ ಕಿರಣಗಳು ನಾಲ್ದೆಸೆಗೆ ಬೀರ
ಲುಡುಪತಿಗೆ ನಿಲ್ಲಲೆಡೆಯಿಲ್ಲವಾಯ್ತಾಗ;
ಪಡೆಯೆಲ್ಲವಂ ಕಳುಹಿ ಪೋದನವಸರದೆ ತಾಂ
ಸಡಗರದ ಬರ್ಪ ದಿನರಾಜನಿಗೆ ಮಣಿದು.

ತಿಳಿನೀರಿನಿಂ ಪೊಳೆವ ರಾಮಾಂಬುದಿಯಲಿ ತೊಳ
ತೊಳಗಿ ಬೆಳಗುವ ರವಿಯು ಕಿರಣಗಳು ಬೀಳೆ,
ತಳೆದು ಹೊಂಬಣ್ಣವನು ನೋಡಲತಿ ಚೆಲುವಾಯ್ತು
ತಿಳಿಯದೆನಗದರ ಸೊಬಗನು ಬಣ್ಣಿಸಲ್ಕೆ.

ನಡೆದೆ ನಾಂ ಮುಂದೆ; ರಾಮಸಮುದ್ರದಿನ್ನೊಂದು
ಕಡೆಯಲ್ಲಿ ಮಲಗಿರ್ದ ಬೆಳ್ದಾವರೆಗಳು
ಮುಡಿದಡವಿ ಮಾತನಾಡಿಸಲರಿವುತಿನನೆಂದು
ಸಡಗರದೊಳೆದ್ದು ನಕ್ಕುವು ಸಂತಸದೊಳು.

ಲೆಕ್ಕವಿಲ್ಲದ ತಾವರೆಗಳೆದ್ದು ನಗುತಿರಲು,
ಪಕ್ಕದೊಳೆ ನಿಂದಿರ್ದ ನಾಂ ಮೋಹಗೊಂಡು,
ಗಕ್ಕನೊಂದನು ಪಿಡಿದು ಮೊಗಕೆತ್ತಿ ಮುದ್ದಾಡ
ಲಕ್ಕರದಿ ತಾನುರಿದನಿನನದಂ ಕಂಡು.

ತೆಗೆದ ಪೂವಂ ಕೊಂಡು ಮನೆಗೈತರಲ್ಕಾಗ,
ನಗೆಗಣ್ಣಿನಿಂದಲೀಕ್ಷಿಸುತೆ ನಿಂದಿರಲು,
ಇಗೊ, ನಿನಗೆಯೆಂದಾಕೆಗಿತ್ತೆನಾ ತಾವರೆಯ;
ನಗುತಾಕೆ ಕೊಂಡಳದನಧಿಕಹರ್ಷದೊಳು.

(ಉ. ಮ. ರಾ.)

# ಕಾರ್ಕಳ ಗೋಮಟೇಶ್ವರ

ಉನ್ನತ ಶೈಲಶೃಂಗದಲ್ಲಿ, ಕಾರ್ಕಳದಲಿ, ಶಿಲಾಶರೀರಸಂ
ಪನ್ನತೆಯಿಂದ ನಿಂದ ಜನವಿಶ್ರುತಪಾವನಕೀರ್ತಿಯಾದ ತೆಂ
ಕನ್ನಡ ನಾಡಿನಂದಿನಿತಿಹಾಸದ ಶಾಶ್ವತರೂಪನಾದ ನಿ
ನ್ನನೊಲಿದೊಮ್ಮೆ ಕಂಡವರೆ ಧನ್ಯರು, ಕಾರ್ಕಳ ಗೋವುಟೇಶ್ವರಾ!

ಬೆಳ್ಳಿಯ ಬೆಟ್ಟವಲ್ಲಿ ಚಳಿಗಾಳಿಗಳೆನ್ನದೆ ಕಲ್ಲಿನಂತೆ ನಿಂ
ದಲ್ಲಿಯೆ ನಿಂದು, ಕಣ್ಣನರೆ ಮುಚ್ಚಿ, ದಿಗಂಬರ ಮೌನಿಯಾಗಿ, ತ
ನ್ನಲ್ಲಿಯೆ ತನ್ನ ಚಿಂತಿಸಿದ ನಿನ್ನ ಸುರೂಪವ ಸಾರಭವ್ಯರೀ
ಕಲ್ಲಿನ ಮೂರ್ತಿಯಲ್ಲಿ ಬಿಡಿಸಿಟ್ಟರು, ಕಾರ್ಕಳ ಗೋವುಟೇಶ್ವರಾ!

ಕ್ರಮದಿಂ ಷಷ್ಟಿ ಸಹಸ್ರವರ್ಷವರವಿಾ ಭೂಚಕ್ರಮುಂ ಗೆಲ್ದು ವಿ
ಕ್ರಮದಿಂ ಚಕ್ರದ ದರ್ಪದಿಂದೆ ಭರತಂ ಕಂದರ್ಪನೊಳ್, ನಿನ್ನೊಳೆ,
ಸಮರಕ್ಕೈತರೆ ತೋರ್ದೆ ಬಾಹುಬಲಮುಂ ನಾಮಕ್ಕೆ ತಕ್ಕಂತೆ ಮ
ತ್ತಮಲಜ್ಞಾನವ ಕೊಂಡು ಮುಕ್ತಿವಡೆದೈ, ಶ್ರೀ ಗೋಮಟಾಧೀಶ್ವರಾ!

ಭವವಿದು ಸಾರವೆಂದರುಣಲಾರೆವಸಾತವಿದೆಂದರಂತೆಯೇ
ಸವಿದುಣಲಿಚ್ಛೆಯನ್ನು ಬಿಡಲಾರೆವು ನಾವಿದೊ ಪಾಪಜನ್ಮರು
ಭವಸುಖಸಾರವನ್ನು ಸುರಿದುಂಡಿದು ನಶ್ವರವೆಂದು ನಿತ್ಯನಿ
ರ್ಭವಸುಖವನ್ನು ನಿನ್ನವೊಲು ಹೊಂದಿದನಾರೆಲೆ ಗೋವುಟೇಶ್ವರಾ!

ರಾಗಿಗಳಾಗಿ ಭೋಗವನು ಭೋಗಿಸಲಾರೆವು ನಾವು; ಮತ್ತೆ ನೀ
ರಾಗಿಗಳಾಗಿ ಯೋಗವನು ಯೋಗಿಸಲಾರೆವು ನಿನ್ನ ಹಾಗೆಯೂ
ರಾಗಿಗಳಲ್ಲಿ ಭೋಗದನು ಭೋಗಿಯು ನೀನೆಲೆ ಕಾಮದೇವನೇ!
ತ್ಯಾಗಿಗಳಲ್ಲಿ ಯೋಗದನು ಯೋಗಿಯು ನೀನೆಲೆ ಗೋವುಟೇಶ್ವರಾ!

ಸುಖಮಿನಿತಿಲ್ಲದೀ ಭವವ ಬಿಟ್ಟಘರಾಶಿಯ ಸುಟ್ಟು ಸಂತಪಃ
ಶಿಖಿಯನು ಭುಗ್ಗನೆಬ್ಬಿಸಿದ ನಿನ್ನ ಮಹಾದ್ಭುತದೃಶ್ಯಮುಂ ಚತು
ರ್ಮುಖನವಲೋಕಿಸುತ್ತೆ ಬೆರಗಿಂದುರಿ ಮ್ಯೆಮರೆತಿರ್ಪನೀ ಚತು
ರ್ಮುಖಬಸದಿ ಸ್ಥಿರಾಶ್ರಯದಿ ನಿನ್ನಿದಿರಲ್ಲಿದೊ ಗೋವುಟೇಶ್ವರಾ!

(ಕೆ. ಶಂಬುಶರ್ಮಾ—ಕಾರ್ಕಳ ಗೋಮಟೇಶ್ವರಸ್ತವ)

## ಕೋಗಿಲೆ

"ಕೂ! ಹೂ! ಕೂ! ಹೂ!" ಎನ್ನುತ ಹಾಡುವ
ಕಿನ್ನರಕಂಠದ ಕೋಗಿಲೆಯೆ,
ಮಾವಿನ ತಳಿರೊಳು ದೇವತೆಯಂದದಿ
ನೀನಡಗೇನನು ಹಾಡುತಿಹೆ?

ಹುಲ್ಲೆಯು ತರದಲಿ ನಲಿಯುತ ಹಸುರಲಿ
ಮೆಲ್ಲನೆ ಬನದಲಿ ಬರುವಾಗ,
"ಕೂ! ಹೂ! ಕೂ! ಹೂ!" ಮೋಹದ ಗಾನದಿ
ದೇಹದಿ ಬಾಲ್ಯವ ನೀ ತರುವೆ!

ಲೋಕಕೆ ಬಂದಿಹ ನಾಕದ ದೂತನೆ
ಅಭಿನವ ಮಧುವನ ವೈಣಿಕನೆ,
ಎಚ್ಚರಿಸೆಚ್ಚರಿ ಸೊರಗಿದ ಜಡರನು,
ನೆಚ್ಚನು ನೆಡು ವೈತಾಳಿಕನೆ!

ಮಿತ್ರನು ಗಗನದಿ ಚಿತ್ರದಿ ಮುಳುಗಲು,
ಛತ್ರಿಯು ಕತ್ತಲೆ ಹಿಡಿಯುವಾಗ;
ಕುಂಭಿನಿ ಕೂಹೂ ಅಂಬರಕೇರುತ
ಕಂಬನಿಕರೆವುದು ಕೋಗಿಲೆಯೆ.

"ತೊಲಗಿತು ಮಾಗಿ" ಎನ್ನುತ ಕೂಗಿ
ಮುಕ್ತಿಯು ಸಾರ್ವೆ ಸ್ವರಯೋಗಿ!
"ಬಂದಿತು ಸುಗ್ಗಿ" ಎನ್ನುತ ಹಿಗ್ಗಿ,
ಬಗ್ಗಿಸು! ಬಗ್ಗಿಸು ರಸಯೋಗಿ!

(ಕೆ. ವಿ. ಪುಟ್ಟಪ್ಪ—ಕೊಳಲು).

## ವಸಂತ

ಶಿಶಿರದೆಸಕವ ಕಳೆದು ಮೆಲ್ಲನೆ
ಬಿಸಿಲು ಬಲಿದುದು, ಗಾಳಿ ತೆಂಕಣ
ದೆಸೆಯೊಳೊಗೆದುದು, ಜಿನಮುದಿಗಳಾದವು ಮಹೀಜಗಳು,
ಶಶಿರುಚಿಗೆ ಸೊಬಗೇರಿದುದು, ರೂ
ಢಿಸಿತು ಕೋಕಿಲಗಾನ, ಪರಿಪೂ
ರಿಸಿದುದಂಕುರನಿಕರ ಪಾವನವಿಟಪಿ ನಿವಹದಲಿ.

ತರುಲತಾನಿವಹಕ್ಕೆ ಯೌವನ
ಮರಳಿ ಬರುತಿಹುದಮಮ! ಮನಸಿಜ
ಧರಣಿಪನ ಸೌಭಾಗ್ಯ! ವಿರಹಿವ್ರಾತದೆದೆಗಿಚ್ಚು!
ಕೊರಳಕತ್ತರಿ ಇದು ಜಿತಾಕ್ಷರಿ
ಗರರೆ! ಸೌಖ್ಯನಿಧಾನಗಳು ಗೋ
ಚರಿಸುವಂಜನಸಿದ್ಧಿಯನುಭವಿಗಳಿಗೆ ಮಧುಸಮಯಾ.

ಕಳಿಕೆಗಳು ಕೊನರಾಗಿ, ಕೊನೆಯೊಡೆ
ದಲೆಗಳೊಂದೆರಡಾಗಿ, ರಾಗಿಸಿ
ತಳಿತು ಸೆಳೆಗೊಂಬಾಗಿ, ನನೆವೊನೆದೋರಿ ಮುಗುಳಾಗಿ,
ಅಲರು ಮಾಮಿಡಿ ಬಲ್ಮಿಡಿಯುಲ
ಗ್ಗಳಿಸಿ ಕಾಯ್ಗಳ ದೋರೆಗಳ ಪ
ಣ್ಗಳ ಸೊಬಗಿನಿಮ್ಮಾವು ಮೆರೆದುದು ಜರೆದು ಸುರಕುಜವಾ

ಕೊಸರುಗಳನರೆಗಚ್ಚಿ, ಕಂಗಳ
ಕೊನೆಗೆ ನಸುಗೆಂಪೇರೆ, ತೀವಿದ
ಸೊನೆ ವದನದಿಂದಿಳಿದದು ತೊಟ್ಟಿಡೆ, ಕೋಡುಗರಿಗಳಲಿ
ತನೆಸೊಗಸಿ ಪಾಡಿದುವು ಮನ್ಮಥ
ಜನಪತಿಯು ಕರಪಂಚಕದ ಸಂ
ಜನಿತವಿಮಲಸುಪಂಚಮುಸ್ವರದಿಂದ ಪಿಕನಿವಹಾ.

ನಲಿದು ವನಸಿರಿ ಭೃಂಗನಾನಂ
ಗಳ ಲತಾಂಗದೊಳನುಗೊಳಿಸಿ, ಕೋ
ಮಲಿತಪಲ್ಲವಹಸ್ತದಿಂದಭಿನಯಿಸಿ, ಯಲರ್ಗಣ್ಣ
ಚೆಲುವಿನಲಿ ಬಹುಭಾವ, ಹಂಸೆಯ
ಲಲಿತಗತಿಯಲಿ ತಾಳವಿರೆ, ತ
ಣ್ಣೆಲರ ನಟದಿಂದಾಡಿ ಮೆಚ್ಚಿಸಿದಳು ಮನೋಭವನಾ.

(ನಾರಾಯಣ—ಉತ್ತರ ರಾಮಕಥೆ)

---

## ಸುಗ್ಗಿ ಬರುತಿದೆ

ಅಡಿಯ ಗೆಜ್ಜೆ ನಡುಗೆ, ಹೆಜ್ಜೆಯಿಡುತ ಸುಗ್ಗಿ ಬರುತಿದೆ!
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸೊಗವ ತರುತಿದೆ!
ಕಣಿರೆಯಿಳಿದು ತಮರನೇರಿ,
ತರುಗಳಲ್ಲಿ ತಳಿರ ಹೇರಿ,
ಹೊಸತು ಜೀವಕಳೆಯ ಬೀರಿ
ಸುಗ್ಗಿ ಮೂಡುತಿರುವುದು!
ಬನದ ಬಿನದದಿನಿದು ನಿನದ ಮನದೊಳಾಡುತಿರುವುದು!

ಬಂಡನುಂಡು ದುಂಬಿವಿಂಡು ಹಾಡುತಿಹವು ಹಾರುತ;
ಮತ್ತಮಧುಮಾಸವಿದು ಬನ್ನಿರೆಂದು ಸಾರುತ
ಜಾರುತಿಹುದು ಮಾಗಿ ಚಳಿ,
ಕುಸುಮಿಸಿರುವ ಲತೆಗಳಲಿ
ಮೊರೆಯುತಿಹವು ಸೊಕ್ಕಿದಳಿ
ಮುಕ್ತಜೀವರಂದದಿ!
ಉಲಿಯೆ ಪಿಕ, ಗಳಪೆ ಶುಕ, ಸುಗ್ಗಿಬಂದಿತಂದದಿ!

ಮಾಮರಂಗಳಲಿ ವಿಹಂಗತತಿಯು ನಿಸ್ವನಂಗಳಿಂ,
ತಳಿರ ಸೊಂಪಿನಲರ ಜೊಂಪಿನಾಂತ ಬನಬನಂಗಳಿಂ,
ನಲಿವ ಪಚ್ಚೆಯುಡೆಯನುಟ್ಟು,
ಅರಳಿದರಳುಗಳನು ತೊಟ್ಟು,
ಹಿಮದ ಮಣಿಯ ಮಾಲೆಯಿಟ್ಟು
ತಣಿದು ಸೋಲೆ ಕಣ್ಮನಂ
ಕರೆವಳೋವಿ ಬನದದೇವಿ ತನ್ನ ಸುಗ್ಗಿಯಾಣ್ಮನಂ!

ಹಾರಿ ಮೊರೆವ ಜಾರಿ ಹರಿವ ತೊರೆಯು ತಂಪು ದಡದೊಳು
ಮೇಲೆ ಭಾನು ತೇಲೆ, ನಾನು ಕುಳಿತು ಮರದ ಬುಡದೊಳು
ತಿರೆಯ ಸಿರಿಯ ನೋಡುತಿರುವೆ;
ಕುರಿತು ಹಾಡ ಹಾಡುತಿರುವೆ;
ಸೊಲಗಿನೊಡನೆ ಕೂಡುತಿರುವೆ
ಕರಗಿ ಮುಳುಗಿ ತೇಲುತ!
ತೊರೆದ ಗಂಡನೆದುರುಗೊಂಡ ಕೋಮಲೆಯನು ಹೋಲುತ!

ತರುಗಳೆಲ್ಲ ಮೇಯೆ, ಗೊಲ್ಲ ಬಸಿರಿಮರದ ನೆಳಲಲಿ
ಮಲಗಿಸಿಹನು ಮಧುವನವನು ಮುದವನುಲಿವ ಕೊಳಲಲಿ!
ನಿಂತು ಮೇವ ಮರೆತುಬಿಟ್ಟು,
ಕಿವಿಯನೆರಡ ನೆಟ್ಟಗಿಟ್ಟು,
ಗೊಲ್ಲ ನೆಡೆಗೆ ದಿಟ್ಟಿಯಿಟ್ಟು
ಬರೆದ ಚಿತ್ರದಂದದಿ
ಗವಿಗಳೆಲ್ಲ ಸವಿಯ ಸೊಲ್ಲನಾಲಿಸಿಹವು ಚಂದದಿ!

ಗಿರಿಗಳಿರಾ, ತೊರೆಗಳಿರಾ, ಎಲೆ ವಿಹಂಗಮಗಳಿರಾ,
ತರುಗಳಿರಾ, ಬನಗಳಿರಾ, ಮುಗಮುಗಿಪ ಸುಮಗಳಿರಾ,
ಸೊಬಗೆ ನನ್ನಿ ಎಂದು ಸಾರಿ;
ನನ್ನಿಯೆ ಸೊಬಗೆಂದು ತೋರಿ;
ಸೊಗದ ಸೊದೆಯ ತಿರೆಗೆ ಬೀರಿ;
ಒಲ್ಮೆ, ಸೊಬಗು, ಸೋಗದಲಿ
ಪರಮಪುರುಷನಮಲ ಹರುಷವಿಹುದು ಸಾರಿ ಜಗದಲಿ.

ಮಧುವೆ ಬಾರ! ಮುದವ ತಾರ! ನೀನೆ ದೇವದೂತನು!
ಪರದ ಚಿಂತೆ ಮರೆಯದಂತೆ ಕುಳುಹುವನು ವಿಧಾತನು!
ಬುವಿಯ ಸಿಂಗರಿಸುತ ಬಾರ!
ಪರದ ಬೆಳಕನಿಳಿಗೆ ತಾರ!
ಸೊಬಗೆ ಶಿವನು ಎಂದು ಸಾರ!
ಬಾರ ಶಕ್ತಿದಾಯಕ!
ಹಳೆತ ಕೂಡಿ ಹೊಸತು ಮಾಡಿ ಬಾರಲೆ ಋತುನಾಯಕ!

(ಕೆ. ವಿ. ಪುಟ್ಟಪ್ಪ—ಕೊಳಲು)

---

## ಭಾವನೆ

ಮದುಮಾಸದಾನಂದ ಹೂಗಳೊಡನಳಿಯುವುದು.
ವಿಧುಕಿರಣಗಳ ಸೊಬಗು ಮುಗಿಲುಗಳಲಡಗುವುದು.
ನೋಡಿದುದ ನೋಡಿದರೆ ಮೋಹಿಸುವ ಕಣ್ಣೆಲ್ಲಿ?
ಬಾಡದಂತಹ ಕದಪು ದಂತಾವಮೌಕ್ತಿಕವೆಲ್ಲಿ?
ಕೇಳಿದುದ ಕೇಳಿದರೆ ಸವಿಮಾತಿಗಿಂಪೆಲ್ಲಿ?
ಹೇಳಿದುದ ಹೇಳಿದರೆ ಕಥೆಗೆ ರಂಜನವೆಲ್ಲಿ?
ಆವ ಸುಖವೃಷ್ಟಿಯಲಿ ಬುದ್ಬುದದ ಪರಿಯಿಲ್ಲ?
ಭಾವನೆಯ ಹಾರಗೊಡು; ವಿರತಿಯಲಿ ಸುಖವಿಲ್ಲ.
ಅದರ ಮಹಾತ್ಮ್ಯವೆನಿತೆಂದು ಬಣ್ಣಿಸಬಹುದು?
ಒದಗಿದ ಶಿಶಿರದೊಳಗೆ ಚೈತ್ರವನು ಬರಿಸುವುದು.
ಕವಿದ ಕಾರ್ಮುಗಿಲನೋಡಿಸಿ, ನೀಲ ನಭದೊಳಗೆ
ರವಿಯ ಮೂಡಿಸಿ ಮುದವ ನೀಡುವುದು ತಾವರೆಗೆ;
ಸೇವಂತಿಗೆಯ ಸೊಬಗು, ಮಲ್ಲಿಗೆಯ ನರುಗಂಪು,
ಆವಾಗಲೂ ತಪ್ಪದದಕೆ ಮಾವಿನ ಸೊಂಪು.
ಅನುಭವಕೆ ವಿಧಿಬದ್ಧ ಹರ್ಷಗಳು ದೊರೆಯದಿರೆ,
ಅನಿರುದ್ಧ ಭಾವನೆಗೆ ಮನದ ಪಂಜರವ ತೆರೆ.

(ಎನ್. ನಾರಾಯಣರಾವ್—ಆಂಗ್ಲ ಕವಿತಾವಳಿ)

---

# ಕಲಾಮಹಿಮೆ

ನೀರನೀರೆಯುಂದು ಬೇರಾಗಲಿಹುದೆಂದು
ಸಾರಿ ಮನದಣಿಯೆ ಮುದ್ದಾಡುತಗಲಿದರು—
ದೂರೆದಲಿ ನಿಂದ ಕವಿಯೆದೆಯೊಳಿದು ಸೇರಿ, ನಿಲ
ಲಾರದೊಡನೊಂದು ಹಾಡಾಗಿ ರಂಜಿಸಿತು.

ತರಣಿ ಪಡುವಣಕಿಳಿದು, ಕೆಂಬಣ್ಣದಿಂ ಪೊಳೆದು,
ಕಿರಣಗಳ ಸಿರಿಯು ಕಡಲೊಳು ಕರೆದು ಮೆರೆದಂ,—
ನೆರೆದ ಸಂಜೆಯ ಸೊಬಗೆ ನೋಡಿ ಸಂತಸಗೂಡಿ
ಬರೆದನದರೊಂದು ಚಿತ್ರಕನು ಚಿತ್ರವನು.

ಅಳುವ ಮಗುವನು ಪಿಡಿದು ಬಿಗಿದಪ್ಪಿ ಲಾಲಿಸುತ,
ಕಳೆಕಂತೆ ಮನಕೆ ಬಂದಂತೆ ಹಾಡಿದಳು.—
ಬಳಿಯೊಳಿರ್ದೊರ್ವ ಗಾಯಕನದರ ಸವಿಗೊಲಿದು
ಕಳೆದುಂಬಿ ನುಡಿಗಳಿಗೆ ರಾಗಗಟ್ಟಿದನು.

ಅಡಿಯಿಂದ ಮುಡಿಯುನಕ ಕಡು ಚೆಲುವೆಯುಹ ಮಡದಿ
ನುಡಿಯುುತಿರ್ದಳು ತನ್ನ ಕೈಯ ಗಿಣಿಯೊಡನೆ—
ನಡೆ ನೋಡಿಯುವಳ ಚೆಲುವಿಗೆ ಸೋತ ವರಶಿಲ್ಪಿ
ಪದಿಯೊಡಲನೊಂದು ಶಿಲೆಗಡಿದು ಮಾಡಿದನು.

ರಸಿಕರೆದೆಗೊಡಿ ಹಸನಾಗಿ ನೆಲಸಿತು ಹಾಡು;
ಕಿಸುಸಂಜೆ ಸೊಬಗು ಚಿತ್ರದೊಳೆಸೆದುನನಿಶಂ;
ಬಿಸಜಾಕ್ಷಿಯುರ ಬಾಯೊಳುಳಿದಿಹುದು ರಾಗವದು;
ನಸುಗೆಡದೆ ನಿಂದಿತರೆಯೊಳು ಪೆಣ್ಣ ಚೆಲುವು.
ನೀರನೀರೆಯುರ, ಕವಿರವಿವರ್ಣಗಳ, ಚಿತ್ರ
ಕಾರಗಾಯುಕರರಾಗರೂಪಶಿಲ್ಪಿಗಳ,
ಧಾರಣಿಯುನೇ ಸೃಷ್ಟಿಸಿದ ಶಿಲ್ಪಿವರ್ಯನವ
ನಾರಯಿದು ನೋಡಿ ಮನಮೆಚ್ಚಿ ಹರಸಿದನು.

ಲೋಕವಿದು ದಃಖಮಯವೆಂಬುದದು ನಿಜವಹುದು.
ನಾಕಸುಖವಿದರೊಳಿರಬೇಕೆಂದರಹುದೇ?
ಶೋಕಿಸದೆ, ಸುಖಬಿಂದುಗಳ ಚೆಲ್ಲಗೊಡದೆ, ಸುವಿ,
ವೇಕದಿಂದಿಂತು ಕಲೆಯೊಳಗೆ ಚಿರಗೊಳಿಸೈ.

(ಉ. ಮ. ರಾ.)

---

## ಕಾವೇರಿ

ಗಿರಿಯ ಕೆಲದಿ ಬನದಿ ನಡುವೆ, ಝುರಿಯ ತೆರದಿ ಸುಳಿದು ಬರುತೆ,
ತಲದ ಶಿಲೆಯನಿರಿದು ಕೊರೆದು, ಕೆಲದ ನೆಲವನರೆದು ಮುರಿದು,
ವಿಮಲಜಲದ ವಿಪುಲಧಾರೆಯಮೃತಲಹರಿಯಂತೆ ತೋರೆ,
ದಣಿವ ಕಳೆಯುವೆಲರ ಬೀರಿ, ಮೃದುಲರವದಿ ಮುಂದೆ ಸಾರಿ,
ಅತ್ತಲತ್ತ ಸುಳಿದು ಸುತ್ತಿ, ಇತ್ತಲಿತ್ತ ಮೆಲ್ಲನೊತ್ತಿ,
ಅಲ್ಲಿ ಬಳಕುತಿಲ್ಲಿ ಬಾಗಿ, ಅಲ್ಲಿ ಬಳಸುತಿಲ್ಲಿ ಸಾಗಿ,
ನೊರೆಯ ಸೇಸೆಗಳನು ಸೂಸಿ, ತೆರೆಯ ಚವರಗಳನೆ ಬೀಸಿ,
ಬಾಲೆಯಂತೆ ನಲಿದು ಕುಣಿದು, ಕಾಳಿಯಂತೆ ಕನಲಿ ಮೊರೆದು,
ಉರಗಿಯಂತೆಯುರುಗಿ ತಿರುಗಿ, ಛಲದ ಭರದಿ ಸರಿದು ಮುಸಗಿ,
ಬೆಟ್ಟದಿಂದಲುರುಳಿ ಹೊರಳಿ, ದಿಟ್ಟತನದಿ ತೊಳಗಿ ಮೊಳಗಿ,
ಘೋರವೇಗದಿಂದೆ ನೆಗೆದು, ಭೋರೆನುತ್ತೆ ಮಂಜನೆಸೆದು,
ಪಸಿಯ ಮುಗಿಲ ಕವಿಸಿ ಸರಿದು, ಮನುಜಸೇವೆಯಿಂದಲೊಲಿದು.
ಬಲವ ಬೆಳಕ ನೀಡುತುಂ, ನೆಗೆದು ಪಾರುತೋಡುತುಂ,
ನುಗ್ಗಿ ಬೀಳುತೇಲುತುಂ, ನೆಗೆದು ಪಾರುತೋಡುತುಂ,
ಭುವನರಚನೆಯೆನಿತು ಕುತುಕಮೆನುತ ಜನಕೆ ಸಾರುತುಂ
ಭುವನಜನನಿಯೆನಿತು ಚತುರಳೆನುತ ಕಣ್ಗೆ ತೋರುತುಂ,
ಪುರುಷಬಲವ ಬೆಳಗಿರೆನುತ ಜಡರ ಪಳಿದು ಮೊಳಗುತುಂ
ಪರಿವಳೀ ಕವೇರತನಯೆ ಧೀರ ಜನನಿಯೆನಿಸುತುಂ.

(ಡಿ. ವಿ. ಗುಂಡಪ್ಪ—ನಿವೇದನ)

---

# ಕೃಷ್ಣಲೀಲೆ

ನೆನೆಯುದೆ ಗೋಪಿ ಪಾಲ್ಗಡೆವುತಂ ಮನೆವಾರ್ತೆಗೆ ಪೋಗೆ ಗೆಜ್ಜೆಯಿಂ
ದನಿ ನಸು ಪೊಣ್ಮದಂತು ಪರಿತಂದೆಡಗೈಯೊಳೆ ತೋಡಿ ಬೆಣ್ಣೆಯಂ
ತಿನುತಿರೆ ಗೋಪಿ ಕಂಡೆಲೆಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ, ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ.

ಶಕಟವಿಮರ್ದಿ! ನೀಂ ಮುಸಲಿ ಬಾರದ ಮುನ್ನಮೆ, ನಮ್ಮ ಹೇಮಘಂ
ಟಿಕೆ ಘಣಿಲೆಂಬ ನಂದಿನಿಯ ಪಾಲಿದು ನೀಂ ಕುಡಿಯಲ್ಕೆ ನಿನ್ನ ಜೆಂ
ಡಿಕೆ ಬೆಳೆದಪ್ಪುದೆಂದಬಲೆ ನಂಬಿಸೆ, ಪಾಲ್ಗುಡಿದೀಗಳಿಂಬ ಜೆಂ
ಡಿಕೆಯೆನಿತುದ್ದವಾದುದೆನುತಂ ಬೆಳಗೊಳ್ವ ಮುಕುಂದನೊಪ್ಪಿದಂ.

ಕತೆಯಂ ಕೇಳೆಲೆ ಕಂದ, 'ಹುಂ!' ರಘುಜನೆಂಬಂ, ಹುಂ! ಸಕಾಂತಂ ವನ
ಸ್ಥಿತನಾದಂ ಗುರು ಪೇಳೆ, ಹುಂ! ದಶಶಿರಂ ಕೊಂಡೊಯ್ದನಾ ರಾಮನಾ
ಸತಿಯಂ ತಾನೆನೆ, ಪೂರ್ವಮಂ ನೆನೆದು, ಹುಂಹುಂ ಕೊಳ್ಳದುತ್ಕೋಪಹೂಂ
ಕೃತಿಯಂ ಮಾಡುತಲಾಡುಗಚ್ಚಿ ಕಿಸುಗಣ್ಬಿಟ್ಟಚ್ಯುತಂ ರಂಜಿಕುಂ

"ಹರಿ ನೀಂ ಮಣ್ತಿಂದೆ;" "ತಿನ್ನೆಂ, ಜನನಿ, ಹುಸಿದನೆಮ್ಮಗ್ರಜಂ;"
"ತೋರು ವಕ್ತ್ರಾಂ
ತರಮಂ;" "ನೋಡೆ"ಂದು ಬಾಯಂ ತೆರೆವುದುಮುದರೊಳ್ ವಾರ್ಧಿ
ಯೇಳುಂ, ಕುಲೋರ್ವೀ
ಧರವೇಳು, ದ್ವೀಪವೇಳುಂಬೆರಸು ಜಗಮನೀರೇಳುಮಂ ಕೂಡೆ ಕಂಡ
"ಚ್ಚರಿವಟ್ಟಿಂ, ಮುಚ್ಚು ಮುಚ್ಚಾನನ" ಮೆನುತಮಾ ಕಾಂತೆ ವಿಭ್ರಾಂತೆ
ಯಾದಳ್

(ರುದ್ರಭಟ್ಟ—ಜಗನ್ನಾಥ ವಿಜಯ)

## ರತ್ನಾಕರ ಪಂಚಕ

ತನುವಂ ಸಂಘದ ಸೇವೆಯೊಳ್, ಮನಮನಾತ್ಮಧ್ಯಾನದಭ್ಯಾಸದೊಳ್,
ಧನಮಂ ದಾನಸುಪೂಜೆಯೊಳ್, ದಿನಮನರ್ಹದ್ಧರ್ಮಕಾರ್ಯಪ್ರವ
ರ್ತನೆಯೊಳ್ ಪರ್ವವನೊಲ್ದು ನೋಂಪಿಗಳೊಳಿರ್ದಾಯುಷ್ಯಮಂ
ಮೋಕ್ಷ ಚಿಂ
ತನೆಯೊಳ್, ತೀರ್ಚುವ ಸದ್ಗೃಹಸ್ಥನನಗಂ, ರತ್ನಾಕರಾಧೀಶ್ವರಾ!

ಪರಸಂತೋಷಮೆ ಸೌಖ್ಯಮೆಂಬ, ಪರದುಃಖಂ ತನ್ನ ನೋವೆಂಬ, ತಾಂ
ಪರನೆಂಬಂದಮನಿಂತುಜಂಬ, ಪರಲೋಕಂ ತನ್ನ ನಾಡೆಂಬ, ತಾಂ
ಜರಮುಜ್ಞಾನಿ ಜಗದ್ಗುರುಂ ಮುಮುಗುರುಂ ದೇವೇಂದ್ರಕೀರ್ತಿವ್ರತೀ
ಶ್ವರನಾತಂ; ಪೆರನಲ್ತು, ನೀನೆ; ಪೆರನೇಂ? ರತ್ನಾಕರಾಧೀಶ್ವರಾ!

ನಿನ್ನಂ ಚಿಂತಿಸುತಿರ್ಪವಂಗೆ ಪರದೇಶಂ ತನ್ನ ದೇಶಂ ಪರರ್
ಕನ್ನಿಷ್ಟರ್, ಪಗೆಗಳ್ ಭಟರ್, ದೊರೆಗಳಾತ್ಮಸ್ನೇಹಿತರ್, ಕಿಚ್ಚು ಬಾ
ವನ್ನಂ, ವ್ಯಾಧಿ ಸುಖಂ, ವಿಷಂ ಸುಧೆಯೆ,ನಿಕ್ಕುಂ ನೆಲೀಡೆ ನೀನಿರ್ದುಮಾ
ನಿನ್ನೊಂದಕ್ಕೆಳಸಿರ್ಪನೇಕೆಯಕಟಾ! ರತ್ನಾಕರಾಧೀಶ್ವರಾ!

ನೀನಾನೆಂಬರಿವಾಗೆ ಸಾಕು; ಸಿರಿಯೇಂ, ದಾರಿದ್ರ್ಯಮೇಂ? ಗ್ರಾಮಮೇಂ,
ತಾನೇಂ? ಪಾಲುಣಿಸೇಂ,ಕದನ್ನದುಣಿಸೇಂ? ನಿರ್ಬಂಧಮೇಂ,ರಾಜ್ಯಮೇಂ?
ಈ ನಾನಾ ವಿಧಿಯೆಲ್ಲವುಂ ಕನಸಿವಂ ಕೊಂಸೀನೋ ನೀನೆನ್ನ ಸಂ
ಧಾನಂ, ನಿತ್ಯಸುಖೈಕವಿನ್ನುಳಿದುವೇಂ? ರತ್ನಾಕರಾಧೀಶ್ವರಾ!

ನಡೆದೆಂ ಚಿತ್ತಕೆ ಬಂದವೋಲ್, ನುಡಿದೆ ನಾಂ ಬಾಯ್ಗಿಚ್ಛೆ ಬಂದಂತೆ, ಸ್ವೈ
ಗೆಡೆದೆಂ ದುಃಖಸಮುದ್ರದೊಳ್, ಪಡೆದೆನಂಥಂ ಕಣ್ಗಳಂ ಪೆತ್ತವೊಲ್
ಬಿಡೆ ನಿಮ್ಮಂಘ್ರಿಗಳಂ ಬಿಡೆಂ ಬಿಡೆನುದಾರಂ ನೀನಹೋ, ಬಲ್ಲೆನೆ
ನ್ನೊಡೆಯಾ! ರಕ್ಷಿಸು, ರಕ್ಷಿಸಾ ತಳುವಿದೇಂ? ರತ್ನಾಕರಾಧೀಶ್ವರಾ!

ರತ್ನಾಕರಸಿದ್ಧ—ರತ್ನಾಕರಾಧೀಶ್ವರ ಶತಕ)

# ಅಪರಾಜಿತಾಷ್ಟಕ

ನಿನ್ನ ಪದಾಬ್ಜಭಕ್ತಿ, ವಿಷಯಾರ್ಥವಿರಕ್ತಿ, ತಪೋಭರಕ್ಕೆ ಸಂ
ಪನ್ನತೆವೆತ್ತ ಶಕ್ತಿ, ತನುವಂ ಸಲೆ ಭೇದಿಸಿ ತನ್ನ ರೂಪನ
ಚ್ಛಿನ್ನದೆ ಕಾಣ್ಬ ಯುಕ್ತಿ, ಗುಣದಲ್ಲನುರಕ್ತಿ, ಯಿವಾಗೆ ಮುಕ್ತಿ, ಜೀ
ವನ್ನರನಾಗಿನಂ ಪಡೆಯನಿರ್ದೊಡದೇಕಪರಾಜಿತೇಶ್ವರಾ?

ನಿನ್ನನೆ ನಂಬು, ನಂಬಿದೊಡೆ ನನ್ನನೆ ನಂಬಿದೆ, ಶುದ್ಧ ದೃಷ್ಟಿಯಿಂ
ನಿನ್ನನೆ ನೋಡು, ನೋಡಿದೊಡೆ ನನ್ನನೆ ನೋಡಿವಂ, ಸುಚಿತ್ತದಿಂ
ನಿನ್ನೊಳಗೈಕ್ಯವಾಗದುವೆ ನನ್ನೊಳಗೇಕತೆಯಾದುದೆಂದು, ರ
ತ್ನೋನ್ನತಿಯುಂತುಟೆಂದೊರೆದೆ ನೀನೆ ಬುಧಂಗಪರಾಜಿತೇಶ್ವರಾ!

ಆವನುಮಕ್ಕೆ ನಿನ್ನಡಿಗಳಂ ನೆನೆವಾತನೆಯನ್ನ ಬಂಧು, ಸ
ದ್ಭಾವದೆ ಪೂಜಿಪಾತನೆ ಸಖಂ, ಶ್ರುತಯೋಗಸಮೃದ್ಧನೆನ್ನ ಸಂ
ಜೀವನನೆಂಬನೇಕಿನಿತು ಪಕ್ಷವಿದೆಂದೊಡೆ ನನ್ನ ಮೊಚ್ಚಿನಾ
ದೇವನ ನಚ್ಚಿದಾತನೆನಗನ್ಯನೆ ಪೇಳಪರಾಜಿತೇಶ್ವರಾ!

ರವಿ ನಡೆದತ್ತಲೆಲ್ಲ ಬೆಳಕಲ್ಲದೆ ಕತ್ತಲೆಯುಂಟೆ? ಆತ್ಮತ
ತ್ತ್ವವೆ ಮನದಲ್ಲಿ ನಟ್ಟು ನುಡಿವಾತನ ಮಾತುಗಳೆಲ್ಲ ಮೋಕ್ಷಮಾ
ರ್ಗವೆ! ಅವನೆಲ್ಲಿ ನಿಂದನದು ತೀರ್ಥ! ಅವಂ ನಡೆದತ್ತ ಸರ್ವರು
ತ್ಸವಮಿದು ನಿಮ್ಮ ಮಾರ್ಗದ ರಹಸ್ಯವಲಾ, ಅಪರಾಜಿತೇಶ್ವರಾ!

ಇತ್ತೊಡೆ ಬರ್ಪುದೇ ಬಡತನಂ? ಕುಡದಿರ್ದೊಡೆ ಲಕ್ಷ್ಮಿ ನಿಲ್ವುದೇ
ಸತ್ತೊಡೆ ಜೀವನಂತೆ ಲಯವಾದನೆ? ಜೀವಿಸುತಿರ್ದೊಡಿರ್ದನೇ?
ಎತ್ತಣ ಮಾತಿವೆಲ್ಲ? ಬರುಹುಂ ಬಯಲಾಗುತುಮಿರ್ಪುವೈಸೆ! ನಿ
ಮ್ಮತ್ತಣ ಭಕ್ತಿಯೊಂದೆ ನಿಜಸಿದ್ಧಿಯಲಾ, ಅಪರಾಜಿತೇಶ್ವರಾ!

ಚೆಲುವರ ಚೆಲ್ವ! ಚೆನ್ನಿಗರ ಚೆನ್ನ! ಸುವೀರರ ವೀರ! ಸತ್ಕಲಾ
ಬಲರ ಬಲಾಢ್ಯ! ಬಲ್ಲಿದರ ಬಲ್ಲಹ! ದೇವ! ನೀತಿ ನಿ
ರ್ಮಲರ ನಿಧಾನ! ನಿಚ್ಚ ಮದುಮಕ್ಕಳ ಮಾಣಿಕ ಕಾಂತಿ! ಶಾಂತಿ ಶೀ
ತಲರ ಶಿರೋಮಣೀ! ನಿನಗೆ ಸಾಸಟಿಯಾರಪರಾಜಿತೇಶ್ವರಾ?

ಜಡಮತಿಯ್ತೆಸೆ ನಾಂ ಪರಮ, ನಿಮ್ಮ ಗುಣಂಗಳನೆಲ್ಲಮಂ ಮನಂ
ಬಿಡಿಯೆ ನಮರ್ಥನಲ್ಲೆನದರಿಂ ಕಿರಿದಂ ಪಿಡಿದಿರ್ಪೆನೆಂತೆನಲ್,
ಕೊಡದೊಳಗೆಷ್ಟು ನಿಲ್ವುವು ಸಮುದ್ರಜಲಂ? ವರಕಾಂಚನಾದ್ರಿ ಕ
ನ್ನಡಿಯೊಳಗೆಷ್ಟು ತೋರ್ಪುದವಧಾರಿಸು ನೀನಪರಾಜಿತೇಶ್ವರಾ

ಬಂದೊಲವಿಂದೆ, ನಿನ್ನಿದಿರೊಳೊಪ್ಪದಿ ನಿಂದು, ಕರಂಗಳಂ ನೊಸ
ಲ್ಗೊಂದಿಸಿ, ದೇವ! ದೇವ! ಕರುಣಾಕರ! ಬಿನ್ನಪವಾತ್ಮಸಿದ್ಧಿಯಿ
ನ್ನೆಂದೆನಗಪ್ಪುದೆಂದೊಡೆಲೆ ಕಂದ, ಕಡಂಗದಿರಿಂದು ನಾಳೆ ನ
ಮ್ಮಂದವೆಯಪ್ಪೆಯೆಂಬ ನುಡಿಗೇಳ್ಪೆನದೆಂದಪರಾಜಿತೇಶ್ವರಾ?

(ರತ್ನಾಕರಸಿದ್ಧ—ಅಪರಾಜಿತೇಶ್ವರ ಶತಕ)



# ಮಕ್ಕಳ ಕಥೆಗಳು

ಅಗರ್ಣಿ ಮುದ್ದೆ
ಗಾಳಿಯ ಕೋಳಿ, ವೃಕ್ಷದ ಕಪ್ಪು
ಬಿಟ್ಟೀ ಬಸವಯ್ಯ
*ಅಂಗಳದುಗ್ಗು
ಜೋಡು ನಕ್ಷತ್ರ
ಕೊ ಕ್ಕೊ ಕ್ಕೋ ಕೋಳಿ
*ಮೆಣಸಿನ ಕಾಳಪ್ಪ
ಮೂರು ಕರಡಿಗಳು
*ಸಿಗಡಿ ಯಾಕೆ ಒಣಗಲಿಲ್ಲ?
*ಗುಡುಗುಡು ಗುಮ್ಮಟೆ ದೇವರು
ಒಡ್ಡನ ಓಟ
ಗೋವಿಂದಾ! ಗೋವಿಂದಾ!
ಬೆಕ್ಕಿನ ಬಿಡಾರ ಬೇರೆ
*ಇಲಿಗಳ ಥಕ್ಕಥೈ
*ಹೇನು ಸತ್ತು ಕಾಗೆ ಬಡವಾಯಿತು
ಮಾತಾಡ್ಡೋ ರಾಮಪ್ಪ
ಗೋಣಿತಟ್ಟಿನ ಪಟ್ಟೆಹುಲಿ
ಒಂದನೆ ಎರಡನೆ ದರ್ಜೆಗಳು
೧, ೨, ೩ ಭಾಗ
ಏಕ್ ರೋಜ್ ಕಾ ಖಲೀಫ್
ಬೊಕ್ಕೆ ಬಾಯಿ ಕೊಕ್ಕ ರಾಜ
*ತಟಪಟ ಹನಿಯಪ್ಪ
ಮೂರನೆ ದರ್ಜೆಯ ಕಥೆಗಳು
*ಅರಬಸ್ಥಾನ
*ಚೀನ
ಡಂ ಡಂ ಡೋಲು
ಸಿಂದಬಾದ ನಾವಿಕ
ಅಲ್ಲಾವುದ್ದೀನನ ವಿಚಿತ್ರ ದೀಪ
ಹುಲಿಪಾಯ
ಹೊಸ ಕನ್ನಡ ಪುಸ್ತಕ ೧ನೇ ಭಾಗ
,, ೨ನೇ ಭಾಗ
…ಕ್ಷಿ ಸಾಕಿದ ಮಗು
ಮಂಜಣ

ಕಾಣಿಕೆ
ಮಂಥರೆಯ ಮಾಟ
ಶತಿಕಾಂತನ ಮೀಲು
ಚಂಡಕೌಶಿಕ
ಬಾರಕೂರಿನ ಗತವೈಭವ
ಕೃಷ್ಣ ಸಂಧಾನ
ಐದನೆ ದರ್ಜೆಯ ಚರಿತ್ರೆ ಮತ್ತು ಕಥೆಗಳು
ಅಜಿತ ಕುಮಾರ
ಚಾಣಕ್ಯತಂತ್ರ ಭಾಗ ೧
ಸಮಾಜದ್ರೋಹಿ
ಕೋಟಿಚೆನ್ನಯ
ರಮಾ ಮಾಧವ
ಸೀತಾರಾಮ
ಯಾದವ ಕೃಷ್ಣ
ಭೀಷ್ಮನ ಕಥೆ
ಕಾವ್ಯರತ್ನಾಕರ
ಪದ್ಯಕಥಾವಳಿ — I ಭಾಗ
ಹಾವು
ಹಸಿವು
ಕಲಿಯುಗದ ಭೀಷ್ಮ
ಹಿಡಿಂಬೆ
ಚಾಣಕ್ಯತಂತ್ರ ಭಾಗ ೨
ಪದ್ಯಸಂಗ್ರಹ
ಪದ್ಯಕಥಾವಳಿ — II ಭಾಗ
ಹಳ್ಳಿಯ ರಾಣಿ
ನಾಟಕ ಕಲೆ
ಸುಭದ್ರಾವಿಜಯಃ ನಾಟಕಂ
ಕೃಷ್ಣಾಕುಮಾರಿ
ಶೂದ್ರಕ
ಯಜ್ಞ ಕುಂಡ
ಶಿಕ್ಷಣ
ವಿಧಿಯ ವೈಚಿತ್ರ್ಯ
ಶ್ರೀಕೃಷ್ಣ ಚರಿತಾಮೃತ
ಚಾಣಕ್ಯತಂತ್ರ (ಇದೀ)

---

*…